|| ಶ್ರೀಮೂಲರಾಮೋ ವಿಜಯತೇ ||  || ಶ್ರೀಗುರುರಾಜೋ ವಿಜಯತೇ ||

# ಶ್ರೀವಿಜಯವೈಭವ

## ಶ್ರೀವಿಜಯದಾಸರ ಸುಳಾದಿಗಳು ಮತ್ತು ಗುರುಗಳ ಮಹಾತ್ಮ್ಯೆ

ಸಂಗ್ರಾಹಕರು
ಶಿರವಾರ ರಾಮಾಚಾರ್ಯ, ಶಿರವಾರ

ಪ್ರಧಾನ ಸಂಪಾದಕರು
ರಾಜಾ. ಎಸ್. ರಾಜಗೋಪಾಲಾಚಾರ್ಯ

ಸಂಪಾದಕರು
ವಿದ್ವಾನ್ ಎನ್. ವಾದಿರಾಜಾಚಾರ್ಯ, ಮಂತ್ರಾಲಯ
ವಿಜಯ ಕೃಷ್ಣರಾವ್ ಉಪ್ಪಲಿ

ಪ್ರಕಾಶಕರು
ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನ
ಶ್ರೀರಾಘವೇಂದ್ರಸ್ವಾಮಿಗಳವರ ಮಠ, ಮಂತ್ರಾಲಯ

ಗ್ರಂಥನಾಮ : ಶ್ರೀವಿಜಯವೈಭವ ವಿಜಯದಾಸರ ಸುಳಾದಿಗಳು
SRI VIJAYAVAIBHAVA (Vijayadasara Suladigalu)

ಪ್ರಥಮ ಮುದ್ರಣ : 2004

ಹಕ್ಕು : ಪ್ರಕಾಶಕರದ್ದು

ಪ್ರತಿಗಳು : 1000

ಪುಟ : xx + 138

ಬೆಲೆ : 75

ಅಕ್ಷರ ಜೋಡಣೆ : ಶ್ರೀಗುರುಸಾರ್ವಭೌಮ ವಿದ್ಯುನ್ಮಾನ ಮುದ್ರಾಣಾಲಯ
ನಂ. 19/20, 'ಶ್ರೀಮೂಲರಾಮ', 2ನೇ ಅಡ್ಡರಸ್ತೆ,
5ನೇ ಮುಖ್ಯರಸ್ತೆ, ಚಾಮರಾಜಪೇಟೆ, ಬೆಂಗಳೂರು.

ಮುದ್ರಕರು : ಶ್ರೀವರ್ಣ ಪ್ರಿಂಟರ್ಸ್
ಬೆಂಗಳೂರು



# ಗ್ರಂಥ ಸಮರ್ಪಣೆ

ಶ್ರೀಹಂಸನಾಮಕ ಪರಮಾತ್ಮ ಪ್ರವರ್ತಿತವಾದ ಪರಂಪರೆಯಲ್ಲಿ ಬಂದಿರುವ
ಸರ್ವಜ್ಞರಾದ ಶ್ರೀಪಾವನಪವನಾಂಶಸಂಭೂತರಾದ
ಜಗದ್ಗುರು ಶ್ರೀಮಧ್ವಾಚಾರ್ಯರ
ಮೂಲಮಹಾಸಂಸ್ಥಾನಾಧೀಶ್ವರ ದ್ವೈತವೇದಾಂತ
ದಿಗ್ವಿಜಯವಿದ್ಯಾಸಿಂಹಾನಾಧೀಶ್ವರರಾದ
ಶ್ರೀಮದ್ವಿಜಯೀಂದ್ರತೀರ್ಥಶ್ರೀಪಾದಂಗಳವರ ಕರಕಮಲಸಂಜಾತರಾದ
ಶ್ರೀಮತ್ಸುಧೀಂದ್ರತೀರ್ಥಶ್ರೀಪಾದಂಗಳವರ ವರಕುಮಾರಕರಾದ

## ಶ್ರೀಮದ್ರಾಘವೇಂದ್ರಗುರುಸಾರ್ವಭೌಮರ

ದಿವ್ಯ ಪಾದಪದ್ಮಗಳಲ್ಲಿ ಈ ಗ್ರಂಥವನ್ನು ರಾಯಚೂರಿನಲ್ಲಿ
ನಡೆದ ಶ್ರೀವಿಜಯದಾಸರ ಆರಾಧನಾ ಶುಭ ಸಮಾರಂಭದಲ್ಲಿ
ಭಕ್ತಿಶ್ರದ್ಧಾದರಪೂರ್ವಕವಾಗಿ ಸಮರ್ಪಿಸಲಾಗಿದೆ.

ಇತಿ ಬುಧಜನಸೇವಕರು
ಸಂಪಾದಕಮಂಡಲಿ



# ಆಶೀರ್ವಚನ

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ಪದವಾಕ್ಯಪ್ರಮಾಣಪಾರಾವಾರಪಾರಂಗತ
ಸರ್ವತಂತ್ರಸ್ವತಂತ್ರ ಶ್ರೀಮದ್ವೈಷ್ಣವಸಿದ್ಧಾಂತಪ್ರತಿಷ್ಠಾಪನಾಚಾರ್ಯ
ಶ್ರೀಮನ್ಮೂಲರಘುಪತಿವೇದವ್ಯಾಸದೇವದಿವ್ಯಶ್ರೀಪಾದಪದ್ಮಾರಾಧಕ ಜಗದ್ಗುರು
ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನಾಧೀಶ್ವರರಾದ ಶ್ರೀಮತ್ಸುಯಮೀಂದ್ರತೀರ್ಥ
ಶ್ರೀಪಾದಂಗಳವರ ಕರಕಮಲಸಂಜಾತರಾದ
ಶ್ರೀಮತ್ಸುಜಯೀಂದ್ರತೀರ್ಥಶ್ರೀಪಾದಂಗಳವರ ವರಕುಮಾರಕರಾದ

## ಶ್ರೀಮತ್ಸುಶಮೀಂದ್ರತೀರ್ಥಶ್ರೀಪಾದಂಗಳವರು

ಮಾಡುವ ನಾರಾಯಣಸ್ಮರಣೆಗಳು

ಪ್ರಕೃತ, ಶ್ರೀಮನ್ಮಧ್ವಾಚಾರ್ಯರಿಂದ ಹರಿದು ಬಂದ ಈ ಸತ್ಸಂಪ್ರದಾಯ ಪರಂಪರೆಯಲ್ಲಿ ಅನೇಕ ಗ್ರಂಥಕಾರರು ಪೀಠಾಧಿಪತಿಗಳಾಗಿ ಮಧ್ವಸಿದ್ಧಾಂತಸೇವೆಯನ್ನು ಮಾಡಿರುತ್ತಾರೆ. ಆದ್ದರಿಂದ ನಮ್ಮ ಮಹಾಸಂಸ್ಥಾನವನ್ನು ವಿದ್ಯಾಸಿಂಹಾಸನವೆಂದು ಕರೆಯಲಾಗಿದೆ. ಇಂತಹ ವಿದ್ಯಾಮಠದ ಪರಂಪರೆಯಲ್ಲಿ ಅನೇಕ ದಾಸರಾಯರುಗಳು ಅವತಾರ ಮಾಡಿ ನಮ್ಮ ಪೂರ್ವಿಕರಾದ ಶ್ರೀನರಹರಿತೀರ್ಥರಿಂದ ಪ್ರಾರಂಭವಾದ ದಾಸಪಂಥವನ್ನು ಉನ್ನತ ಮಟ್ಟಕ್ಕೆ ಕೊಂಡೊಯ್ದಿದ್ದಾರೆ. ಅವರುಗಳಲ್ಲಿ ಮುಖ್ಯರಾದವರೇ ಶ್ರೀವಿಜಯದಾಸರು.

ಜ್ಞಾನಿವರೇಣ್ಯರಾದ ಭೃಗ್ವಂಶಸಂಭೂತರಾದ ಶ್ರೀವಿಜಯದಾಸರು ಸಾಧಕ ಭಕ್ತರ ಮೇಲೆ ಪರಮಾನುಗ್ರಹ ಮಾಡಿರುವರು. ಜ್ಞಾನಸಾಧನೆಗೆ ದಾಸಸಾಹಿತ್ಯ ಮತ್ತು ವ್ಯಾಸ ಸಾಹಿತ್ಯಗಳೆರಡೂ ಕಾರಣವಾಗಿವೆ. ಸುಳಾದಿದಾಸರೆಂದೇ ಪ್ರಖ್ಯಾತರಾಗಿ ದಾಸಸಾಹಿತ್ಯವನ್ನು ಶ್ರೀಮಂತಗೊಳಿಸಿದವರು ಶ್ರೀವಿಜಯದಾಸರು. ಪ್ರಕೃತ ಶ್ರೀಮಠದಿಂದ ನಾವು ನಡೆಸಲ್ಪಡುತ್ತಿರುವ ಶ್ರೀವಿಜಯದಾಸರ ಆರಾಧನಾ ಸಮಯದಲ್ಲಿ ಶ್ರೀಮಠದ ಶಿಷ್ಯರೂ ಆದ ಗುರುಮಧ್ವರಾವ್ ಉಪ್ಪಲಿಯವರ ಪುತ್ರರಾದ ವಿಜಯಕೃಷ್ಣರಾವ್ ಉಪ್ಪಲಿಯವರು ಈ ಹಿಂದೆ ಶಿರವಾರ ರಾಮಾಚಾರ್ಯರಿಂದ ಸಂಗ್ರಹಿತವಾದ ಶ್ರೀವಿಜಯದಾಸರ ಸುಳಾದಿ ಮತ್ತು ಜತೆಗಳನ್ನು ನಮ್ಮ ಮಹಾಸಂಸ್ಥಾನದಿಂದ ಪ್ರಕಾಶಿಸುತ್ತಿರುವುದು ನಮಗೆ ಪರಮಾನಂದವನ್ನು ಉಂಟುಮಾಡಿದೆ.

ದಾಸರಾಯರ ಅನೇಕ ಪದ-ಪದ್ಯ-ಸುಳಾದಿಗಳು ಹೊರಬರುವಂತಾಗಲಿ ಎಂದು ನಮ್ಮ ಉಪಾಸ್ಯಮೂರ್ತಿಯಾದ ಶ್ರೀಮೂಲರಘುಪತಿವೇದವ್ಯಾಸದೇವರಲ್ಲಿ ತಥಾ ಶ್ರೀರಾಘವೇಂದ್ರಗುರುಸಾರ್ವಭೌಮರಲ್ಲಿ ಪ್ರಾರ್ಥಿಸುತ್ತೇವೆ.

ಇತಿ ನಾರಾಯಣಸ್ಮರಣೆಗಳು.

# ಪ್ರಕಾಶಕರ ನುಡಿ

"ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ ಕುರುತೇಽರ್ಜುನ" ಎಂಬ ಗೀತಾವಾಕ್ಯವು ಜ್ಞಾನಾರ್ಜನೆಯ ಮಹತ್ವವನ್ನು ಸ್ಪಷ್ಟವಾಗಿ ತಿಳಿಸಿದೆ. ಅಂಥಹ ಜ್ಞಾನಸಾಧನೆಗೆ ದಾಸಸಾಹಿತ್ಯ ಮತ್ತು ವ್ಯಾಸಸಾಹಿತ್ಯಗಳೆರಡೂ ಕಾರಣವಾಗಿವೆ. ಪ್ರಕೃತ ಸುಳಾದಿದಾಸರೆಂದೇ ಖ್ಯಾತರಾದ ಜ್ಞಾನಿವರೇಣ್ಯರಾದ ಭೃಗ್ವಂಶಸಂಭೂತರಾದ ಶ್ರೀವಿಜಯದಾಸರ ಸುಳಾದಿಗಳ ಸಂಗ್ರಹವನ್ನು ಈಗಾಗಲೇ 1987ರಲ್ಲಿ ಶ್ರೀ ಶಿರವಾರ ರಾಮಾಚಾರ್ಯರು ಮುದ್ರಿಸಿ, ಪ್ರಕಾಶಪಡಿಸಿದ್ದರು. ಅದರ ಪ್ರತಿಗಳು ಈಗ ಓದುಗರಿಗೆ ಉಪಲಬ್ಧವಿಲ್ಲವಾದ್ದರಿಂದ ಪುನಃ ಮುದ್ರಣ ಮಾಡಿಸುವ ಯೋಜನೆಯನ್ನು ಮಾಡಿದೆವು. ನಮ್ಮ ಯೋಜನೆಗೆ ಸ್ಪಂದಿಸಿ ತಮ್ಮ ಸಂಸ್ಥೆಯಾದಾ ವಿಜಯದಾಸಾಶ್ರಮದಿಂದ ಮುದ್ರಿಸಿದ ಈ ಕೃತಿಯನ್ನು ಪುನಃ ಮುದ್ರಿಸಲು ಅವಕಾಶಮಾಡಿಕೊಟ್ಟವರು ಸಂಸ್ಥೆಯವರಾದ ಶ್ರೀಗುರುಮಧ್ವರಾವ್ ಉಪ್ಪಲಿಯವರು.

ಇವರ ಬಗ್ಗೆ ಒಂದು ಮಾತನ್ನು ಹೇಳಲೇಬೇಕು. ಹರಿದಾಸಸಾಹಿತ್ಯಕ್ಕೆ ತಮ್ಮ ಜೀವನವನ್ನೇ ಮೀಸಲಾಗಿಟ್ಟ ಇವರನ್ನು ನಡೆದಾಡುವ ದಾಸಸಾಹಿತ್ಯವೆಂದರೆ ತಪ್ಪಾಗಲಿಕ್ಕಿಲ್ಲ. ಇಳಿವಯಸ್ಸಿನಲ್ಲಿಯೂ ಯುವಕರನ್ನು ನಾಚಿಸುವಂಥಹ ಶ್ರದ್ಧೆ ಉತ್ಸಾಹಗಳ ಚಿಲುಮೆ ಇವರಾಗಿದ್ದಾರೆ. ಈಗಾಗಲೇ ಇವರು ಸಂಗ್ರಹಿಸಿದ "ಓಂಕಾರ ಗಾಯತ್ರೀ ಸಾರಸಂಗ್ರಹ"ವೆಂಬ ಗ್ರಂಥವು ನಮ್ಮ ಮಠದಿಂದ ಮುದ್ರಿತವಾಗಿದೆ. ಇಂಥಹ ಹತ್ತು-ಹಲವು ಗ್ರಂಥಗಳು ಇವರ ಸಂಗ್ರಹದಲ್ಲಿವೆ.

"ಹರಿದಾಸವಾಙ್ಮಯವಿಶಾರದ"ರಾದ ಪೂಜ್ಯ ಶ್ರೀಗುರುಮಧ್ವರಾವ ಉಪ್ಪಲಿ ಇವರ ಪುತ್ರ ಶ್ರೀವಿಜಯಕೃಷ್ಣರಾವ್ ಉಪ್ಪಲಿ, ರಾಯಚೂರು ಇವರು ಶ್ರೀವಿಜಯದಾಸರ ಆರಾಧನೆಯು ರಾಯಚೂರಿನಲ್ಲಿ ವಿಜೃಂಭಣೆಯಿಂದ ನಡೆಯಬೇಕು ಎಂದು ಪೂಜ್ಯ ಶ್ರೀಸುಶಮೀಂದ್ರತೀರ್ಥಶ್ರೀಪಾದಂಗಳವರನ್ನು ಪ್ರಾರ್ಥಿಸಿಕೊಂಡ ಸದುದ್ದೇಶವೇ ಈ ಗ್ರಂಥ ಶ್ರೀಮಠದಿಂದ ಬರಲು ಕಾರಣವಾಯಿತು. ಶ್ರೀಮನ್ಮಧ್ವಾಚಾರ್ಯರ ಮೂಲಮಠವಾದ ಶ್ರೀರಾಘವೇಂದ್ರಸ್ವಾಮಿಗಳ ಮಠದ ಮೂಲಕ ಶ್ರೀವಿಜಯದಾಸರ

ಉತ್ಸವವು ಶ್ರೀರಾಘವೇಂದ್ರಸ್ವಾಮಿಗಳ ಮಠ ಜವಾಹರನಗರ ರಾಯಚೂರ್ ಶಾಖೆಯಲ್ಲಿ ನಡೆದಿದ್ದು ಅನೇಕ ಕಾರ್ಯಕ್ರಮಗಳಲ್ಲಿ ಮಹತ್ವವಾದ ಗ್ರಂಥಪ್ರಕಾಶನ ಸೇವೆಯು ಒಂದು ಮುಖ್ಯವಾದದ್ದು.

ಪ್ರಸ್ತುತ ಈ ಗ್ರಂಥದಲ್ಲಿ ಗುರು ಮಹಾತ್ಮೆಯನ್ನೊಳಗೊಂಡ ಕೆಲವು ಸುಳಾದಿಗಳು ಮತ್ತು ಶ್ರೀವಿಜಯದಾಸರ ಸುಳಾದಿಗಳ ಜತೆಗಳನ್ನು ಸಂಗ್ರಹಿಸಲಾಗಿದೆ.

ಪ್ರಕೃತ ಈ ಸುಳಾದಿಗಳ ಸಂಗ್ರಹ ಪ್ರಕಾಶನಕ್ಕೆ ಅವಕಾಶ ಮಾಡಿಕೊಟ್ಟ ಶ್ರೀಗುರುಮಧ್ವರಾವ್ ಉಪ್ಪಲಿಯವರಿಗೆ ನನ್ನ ಅನಂತ ವಂದನೆಗಳು. ಅದರಂತೆ ಈ ಕೃತಿಯು ಶುದ್ಧವಾಗಿ ಮುದ್ರಣಗೊಂಡು ಹೊರಬರಲು ಸಹಕರಿಸಿದ ಶ್ರೀ ಕೆ. ರಾಘವೇಂದ್ರರಾವ್ ಇವರಿಗೆ ನಮ್ಮ ಧನ್ಯವಾದಗಳು. ಅಕ್ಷರ ಜೋಡಣೆಯನ್ನು ಮಾಡಿಕೊಟ್ಟ "ಶ್ರೀ ಗುರುಸಾರ್ವಭೌಮ" ಮಾಸಪತ್ರಿಕೆಯ ವಿದ್ಯುನ್ಮಾನ ಮುದ್ರಣಾಲಯದ ಎಲ್ಲಾ ಸದಸ್ಯರಿಗೂ ನಮ್ಮ ಧನ್ಯವಾದಗಳನ್ನು ಅರ್ಪಿಸುತ್ತಾ ಶ್ರೀರಾಘವೇಂದ್ರ ಗುರ್ವಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಮೂಲರಾಮಚಂದ್ರ-ದೇವರಲ್ಲಿ ಈ ಕೃತಿಯನ್ನು ಸಮರ್ಪಿಸುತ್ತೇವೆ.

ಇತಿ ಸಜ್ಜನ ವಿಧೇಯ

**ರಾಜಾ. ಎಸ್. ರಾಜಗೋಪಾಲಾಚಾರ್ಯ**

ಶ್ರೀಪಾದಂಗಳವರ ಆಪ್ತಕಾರ್ಯದರ್ಶಿಗಳು

ಶ್ರೀರಾಘವೇಂದ್ರಸ್ವಾಮಿಗಳವರ ಮಠ, ಮಂತ್ರಾಲಯ



ಶ್ರೀವಿಜಯದಾಸರು ಕಾಶಿಯಿಂದ ತಂದ ಈಶ್ವರಲಿಂಗ, ಚೀಕಲಪರ್ವಿ



ಶ್ರೀಮೋಹನದಾಸರಿಗೆ ಅಪಮೃತ್ಯು ಬಂದಾಗ ಬಳಸಿದ ಸ್ಥಳ, ಚೀಕಲಪರ್ವಿ



ಪ್ರತಿದಿನ ಶ್ರೀವಿಜಯದಾಸರು ತುಂಗಭದ್ರಾ ನದಿಯ ಮಧ್ಯಭಾಗದಲ್ಲಿ ಅನುಷ್ಠಾನ ಮಾಡುತ್ತಿದ್ದ ಪ್ರದೇಶ, ಚೀಕಲಪರ್ವಿ



ಶ್ರೀವಿಜಯದಾಸರು ತಮ್ಮ ಎಲ್ಲಾ ದೇವರ ಕಾರ್ಯಕ್ರಮಗಳನ್ನು ಮುಗಿಸಿದ
ನಂತರ ಪ್ರತಿದಿನ ವಿಶ್ರಾಂತಿ ಸಲುವಾಗಿ ಬಳಸಿದ ರಾಮಲಿಂಗೇಶ್ವರ ದೇವಸ್ಥಾನ, ಚೀಕಲಪರ್ವಿ



ಶ್ರೀವಿಜಯದಾಸರು ಕಾಶಿಯಿಂದ ತಂದ ತಂಬಿಗೆ, ಚೀಕಲಪರ್ವಿ



ಚೀಕಲಪರ್ವಿಯಲ್ಲಿರುವ ಶ್ರೀವಿಜಯದಾಸರು ಕಾಶಿಯಿಂದ ತಂದ ಸಾಣೆಕಲ್ಲು



ಅಶ್ವತ್ಥವೃಕ್ಷ, ಚೀಕಲಪರ್ವಿ



ಶ್ರೀಪಾದರಾಜರು ಪ್ರತಿಷ್ಠಾಪಿಸಿದ ಶ್ರೀ ಲಕ್ಷ್ಮೀನರಸಿಂಹದೇವರು, ಚೀಕಲಪರ್ವಿ

# ಸುಭಾಷಿತಗಳು

1. ಧ್ಯಾನಾಧಿಕಾರಿಗಳು ಯಾರನ್ನೂ ಎಂದೂ ನಿಂದನೆ ಮಾಡಬಾರದು.

2. ತನಗೆ ಯಾರಾದರೂ ಏನಂದರೂ ಸಿಟ್ಟಾಗಬಾರದು.

3. ಆತ್ಮ ಪ್ರಶಂಸನೆ ಸರ್ವಥಾ ಮಾಡಿಕೊಳ್ಳಬಾರದು.

4. ಎರಡನೇಯವರಿಗೆ ಮರ್ಮಭೇದಕ ಮಾತಾಡಬಾರದು.

5. ಕ್ರೋಧವಶನಾಗಬಾರದು.

6. ಪುಣ್ಯವಂತರಿಗೆ ಧ್ಯಾನ ಮಾಡಲಿಕ್ಕೆ ಬರುತ್ತದೆ.

7. ಅನಂತ ಜನ್ಮದ ಪಾಪವು ದೇವರಧ್ಯಾನ ಮಾಡಗೊಡುವುದಿಲ್ಲ.

8. ಪಾಪವು ಕೋಪರೂಪದಿಂದ ವ್ಯಕ್ತವಾಗುತ್ತದೆ.

9. ಪುಣ್ಯವು ಶಾಂತರೂಪದಿಂದ ವ್ಯಕ್ತವಾಗುತ್ತದೆ.

10. ಪುಣ್ಯಗಳೊಳಗೆ ಪರಮಾತ್ಮನ ಸ್ತೋತ್ರ ಮಾಡುವುದೇ ಶ್ರೇಷ್ಠಪುಣ್ಯ.

11. ನಾನೇ ಈಶ್ವರನೆಂಬುವದೇ ದೊಡ್ಡ ಪಾಪ.

12. ಸುಖ ಎಂದರೆ ಪರಮಾತ್ಮನಂಘ್ರಿ ಕಮಲಗಳ ಆರಾಧಿಸುವುದೆ.

13. ಮನದಲ್ಲಿದ್ದ ಶ್ರೀಹರಿಯನ್ನು ನೆನೆಯಲು ಬಂದರೆ, ಮನೆಯಾದರೂ ಅಷ್ಟೇ ವನವಾದರೂ ಅಷ್ಟೇ.

ಈ ಗ್ರಂಥದಲ್ಲಿ ಮುದ್ರಿತವಾದ ಸುಳಾದಿಗಳು 1987ರಲ್ಲಿ ಪೂಜ್ಯ ಶ್ರೀಶಿರವಾರ ರಾಮಾಚಾರ್ಯರು ವಿಜಯಾಶ್ರಮ ಪ್ರಕಾಶನ ಶಿರವಾರದಿಂದ ಮುದ್ರಿಸಿ ಉಚಿತವಾಗಿ ಓದುಗರಿಗೆ ಕೊಡಲಾಗಿತ್ತು. ಆ ಗ್ರಂಥದಲ್ಲಿ ಕೆಲವು ಹಿತ ನುಡಿಗಳನ್ನು ಬರೆದುದನ್ನು ಕೆಳಗೆ ಕೊಡಲಾಗಿದೆ.

# ಪರಿವಿಡಿ

# ಶ್ರೀವಿಜಯದಾಸರ ಸುಳಾದಿಗಳು

## ಗುರುಗಳ ಮಹಾತ್ಮ್ಯೆ

### ಸುಳಾದಿ 1

ರಾಗ ಮುಖಾರಿ ಧ್ರುವತಾಳ

ಗುರುಮಂತ್ರವನ್ನೆ ಮಾಡು ಗುಣವಂತನಾಗಿ ಮನುಜಾ। ಗುರುತು ನಿನಗೆ ಪೇಳುವೆನು ಗುಪ್ತವಿಟ್ಟು। ಗುರು ಲಘು ಪಾಪಂಗಳು ದಹಿಸಿ ಪೋಗೋವು ನಿತ್ಯ । ಗುರುವೇ ಮುಖ್ಯನು ಕಾಣೋ ಸದ್ಗತಿಗೆ। ಗುರು ಭಕುತಿ ಬೇಕು ಕಾಣೋ ವೈದಿಕ ಲೌಕಿಕಕ್ಕೆ। ಗುರು ಉಪದೇಶವಿಲ್ಲದೆ ವಿದ್ಯಾವಿಲ್ಲಾ। ಗುರುವೆ ಜಗದ್ಗುರು ತಾನಾದ ಕಾಲಕ್ಕೆ । ಭರತವರ್ಷದಲ್ಲಿ ಜನ್ಮಧರಿಸಿದಾಗ । ನರ ಯಃಕಶ್ಚಿತನಾಗೆ ಅವನಿಂದ ಉಪದೇಶ । ಗುರು ಭಾವದಿಂದ ಕೊಂಡು ನಮಿಸಬೇಕು । ಅರೆ ಮರೆ ಮಾಡಸಲ್ಲಾ ಸ್ವರೂಪೋತ್ತಮನಲ್ಲಾ। ಹರಿ ಆಜ್ಞೆ ಅಂಥಾದ್ದೇ ಮೀರಲುಂಟೆ। ಗುರು ಮುಖದಿಂದ ವಿದ್ಯಾಪ್ರಾಪ್ತವಾಗುವದೆಂದು। ವರ ಶ್ರುತಿ ತತಿಯಲ್ಲಿ ಪೇಳುತಿದಕೊ। ಸುರನರೋರುಗ ಲೋಕದಲ್ಲಿದ್ದ ಕಾಲಕ್ಕೂ। ಗುರುವೆ ಕಾರಣಕರ್ತಾ ಶಿಕ್ಷಿಪುದಕೆ। ಹರಿ ಬ್ರಹ್ಮ ಮರುತಗೆ ಮರುತ ಗರುಡಾಹಿ ಶಿವಗೆ । ಹರಿ ಇಂದ್ರ ಪ್ರದ್ಯುಮ್ನಗೆ ಸುರಪ ಚಂದ್ರಾರ್ಕಯಮಗೆ ।ತರಣಿ ವರುಣಮುನಿಗೆ ವರುಣ ಭೃಗುವಾದಿಗೆ ಹೀಗೆ। ಗುರುವೆನಿಸಿ ಕೊಂಬೋರು ನಿಜಸ್ವರೂಪಾ । ತಾರತಮ್ಯ ಪ್ರಯೋಜನವಲ್ಲಾ ವಿದ್ಯಮಾತ್ರ । ಇರಬೇಕು ಉಪದೇಶಕೊಳಬೇಕಲ್ಲಿ। ಹರಿವಾಯುಗಳಿಗೆಲ್ಲ ವಿದ್ಯಾಭ್ಯಾಸವೇಕೆ ನರಲೀಲೆ ತೋರುವರು ಲೋಕಚರ್ಯಾ। ಉರಗಭೂಷಣ ಮಿಕ್ಕ ಸುರರಿಗೆ। ಜ್ಞಾನಾಂಶಕೆ ಅರಿತು ಅರಿಯರು ಎರಡು ಯುಗದಲಿ ಕಾಣೋ ಅವತಾರದಲ್ಲಿ ವಿದ್ಯಾ । ಗುರುಪ್ರಸಾದವೆ ಬೇಕು ಮನುಜಾಂಗದೀ। ತರತಮ ಇಲ್ಲಿ ಇಲ್ಲ ನೀಚ ಉತ್ತಮಗೆ ಉತ್ತ। ಮರು ಪೇಳುವರು ನೀಚಗೆ ಉಪದೇಶ । ಉರು ಕಾಲ ಇನಿತು ಇಪ್ಪ ಆಮೇಲೆ ಪಕ್ವಕಾಲ । ಬರಲಾಗಿ ತನಗಿಂದ ಒಂದೆರಡು ಗುಣದ। ಗುರುವು ಮೊದಲುಮಾಡಿ ಅಧಿಕಾಧಿಕವಾಗಿ। ಗುರು ದೊರುಕುವನಯ್ಯಾ ಉಪದೇಶಕ್ಕೆ। ಸರಿಯೆನ್ನಿ ಇಲ್ಲಿಗೆ ಸಂಚಿತ ಆಗಾಮಿನಾಶ ಪರಿಪರಿ ಪ್ರಾರಬ್ಧಭುಂಜಿಸುವ ಸಮಯ। ಬರಲಾಗಿ ನಿಜಗುರು ಪ್ರಾಪ್ತನಾಹಾ। ಕರುಣಾದಿಂದಲಿ ಇವನ ಯೋಗ್ಯತೆ ತಿಳಿದು । ಸುಸ್ಥಿರವಾದ ಮಾರ್ಗಭಜನೆ ತೋರಿಕೊಡುವಾ । ತಾರತಮ್ಯ ಇದ್ದರು ನಿಜಗುರು ಸಚ್ಛಿಷ್ಯ। ಪರಲೋಕದಲಿ ವುಂಟು ದೋಷವಲ್ಲಾ।

ಎರಡೊಂದು ಯುಗದಲ್ಲಿ ಮಾತ್ರ ಸ್ವಲ್ಪ ಕೊರತೆಯಿಲ್ಲದೆ ಕಲಿಯುಗದಂತೆಯಲ್ಲ ಇದೆ। ಪರ ಮೂಢಭಾವ ನರಜೀವಿಗೆ। ಧರಣಿಸುರನು ಮೂರು ಜಾತಿಗೆ ಗುರು ಕಾಣೊ। ವರಣೋಚಿತ ಕರ್ಮ ಪೇಳಬೇಕು। ಗುರು ಉಪದೇಶವಿಲ್ಲದ ಮಂತ್ರ ವೃಥಾ। ಕ್ಷರ ಕಾಣೋ ಫಲವಿಲ್ಲ ಸಿದ್ಧಿಸದು। ವರ ಅವರರಿಗೆ ಗುರುಬೇಕು। ಗುರುಬೇಕು ಸರಿ ಮಿಗಿಲು ಗುರುದೊರಕಿದರು। ತೆರಳಿ ಪೋಗಲಿಬಹುದು ಕೇಳಿ ಕೇಳದಲೇ। ಸುದರ್ಶನ ಗ್ರಂಥ ವಿದ್ಯಾಭ್ಯಾಸಕ್ಕೆ। ಗುರುಕುಲವಾಸವಾಗಿ ಶುಶ್ರೂಷ ಚೆನ್ನಾಗಿ। ಪರಮ ಭಕುತಿಯಿಂದ ಮಾಡಬೇಕು। ತಾರತಮ್ಯ ಜ್ಞಾನತತ್ವ ಓದಲೇಕೆ ನಿಜ। ಗುರು ಕರುಣದಿಂದಲಿ ಸಾಧ್ಯವಹುದು। ಸರುವ ಧರ್ಮವೆ ತೊರೆದು ಗುರುಧರ್ಮ ನಡಿಸುತಿಪ್ಪ। ನರಗೆ ಆವಾವ ಭಯವಿಲ್ಲ ಕಾಣೊ। ಪರಮ ಪುರುಷ ನಮ್ಮ ವಿಜಯ ವಿಠ್ಠಲರೇಯನ್ನ। ಚರಣಕಾಂಬುವದಕ್ಕೆ ಗುರುದ್ವಾರ ಸಂಪಾದಿಸು ॥1॥

### ಮಟ್ಟತಾಳ

ಭೂಸುರ ಭೂಭುಜಗೇ ಭೂಭುಜ ವೈಶ್ಯನಿಗೆ। ವೈಶ್ಯ ಚತುರ ಜಾತಿಗೆ ಶೂದ್ರ ತನ್ನವರಿಗೆ। ಲೇಶಬಿಡದೆ ಕರೆದು ಕರುಣದಿಂದಲಿ ಉಪ। ದೇಶ ಮಾಡಲು ಬಹುದು ಇದಕೆ ಸಂಶಯಸಲ್ಲಾ। ಲೇಸು ಲೇಸು ಅವಗೆ ವರಣೋಚಿತಜ್ಞಾನ। ನಾಶವಾಗದು ಕಾಣೋ ಶುಭಮನದಲ್ಲಿ ಇಪ್ಪ। ದೇಶದೊಳಗೆ ಮಹಾ ಕೀರ್ತಿವಂತನಹಾ। ಭಾಸುರ ಮೂರುತಿ ವಿಜಯ ವಿಠ್ಠಲರೇಯಾ। ವಾಸವಾಗಿಪ್ಪನು ಅವರವರಬಳಿಯಾ ॥2॥

### ತ್ರಿವಿಡಿತಾಳ

ಧರೆಯೊಳು ಭೂಸುರ ಬ್ರಹ್ಮೋಪದೇಶಕ್ಕೆ। ವರ ಬ್ರಾಹ್ಮಣ ತನಗೆ ದೊರಕದಿರಲು। ಸರಿಯಾಗಿದ್ದವನಲ್ಲಿ ವಿದ್ಯಾವಿದ್ಯಾದಿಂದ। ನಿರುತ ಗ್ರಹಿಸಬೇಕು ವಿನಯದಿಂದ। ಹಿರಿಯ ಸಮಾನಿಕ ಇಲ್ಲದಿದ್ದರೆ ಅ। ವರನಿಗೇ ವಿದ್ಯ ಪೇಳುವಾಗ! ಇರಳು ಹಗಲು ಧಾರಣ ಶಕ್ತಿಯಿಂದ ನಿಂ। ದಿರದೆ ಚಿಂತಿಸಬೇಕು ಬ್ರಹ್ಮವಿದ್ಯ। ಮರಳೆ ಭೂಸೂರಜಾತಿ ಇಲ್ಲದಿದ್ದರೆ ದೇಶಾಂತರದಲ್ಲಿ ತಾನೊಬ್ಬನಿದ್ದರಾಗೆ। ಕರೆದು ತನ್ನಲ್ಲಿಗೆ ಬಾಹುಜನ ವಿದ್ಯವ। ಪರೀಕ್ಷಿಸಿ ಮನದೊಳು ಗುಣಿಸಿ ಅವನ। ಗುರುವಿದ್ದ ಗ್ರಾಮಕ್ಕೆ ಪೋಗಿ ವಿದ್ಯಾರಂಭ। ಕರಣ ಶುದ್ಧಿಯಿಂದ ಮಾಡಲಿಬೇಕು। ಎರಡನೇ ಜಾತಿಯು ದೊರೆಯದಿದ್ದೆಡೆ ವೈಶ್ಯ। ವರ ಶೂದ್ರಜಾತಿಯ ಕೇಳುವ ವಿವರ। ಪರಿಪರಿ ವಿಧವುಂಟು ಸಾಧನವಲ್ಲ। ಪರಮ ರಹಸ್ಯಕ್ಕೆ ಸಲ್ಲದು ಕಾಣೊ। ಧರೆಯೊಳು ಭಿಕ್ಷುಕ ಜಡಜೀವರ ನೋಡಿ। ಗುರುವು

ಮಾಡಿಕೊಂಡ ಚತುರ್ವಿಂಶತಿತತ್ವ । ಸುರವಿದ್ಯಕ್ಕೆ ಮಾತ್ರ ಸ್ವೋತ್ತಮರಿಂದಲ್ಲದೆ । ಎರಡನೆಯುಪದೇಶ ಕೊಳಲಾಗದು । ಹರಿ ಇಚ್ಛೆಯಿಂದಲಿ ಸಂಸ್ಕಾರಬಲದಿಂದ । ಪರಿಪರಿ ಶೃತಿಗೆ ಅವಿರೋಧವಾಗಿ । ಚರಿಯಾ ತೋರಿದರಾಗೆ ಮನಿಯೊಳು ಪಿತಾಭ್ರಾತಾ । ಪಿರಿಯಾರಾಜ್ಞದಿಂದ ತಿಳಿಯಬೇಕು । ತರುವಾಯ ತರುವಾಯ ತತ್ತ್ವ ವಿಚಾರಿಸಿ । ದುರಿತದಿಂದಲಿ ನರನು ಕಡೆಬೀಳುವಾ। ಸುರಪಾಲಕ ನಮ್ಮ ವಿಜಯವಿಠ್ಠಲರೇಯ । ತಾರತಮ್ಯ ಜ್ಞಾನವಕೊಟ್ಟು ಪಾಲಿಸುವಾ ॥3॥

ಅಟ್ಟತಾಳ

ಶತಕೋಟಿಗಾದರು ಉತ್ತಮ ಗುರುಬೇಕು । ಸತತ ಗುರುಪತ್ನಿ ಗುರುಪುತ್ರ ಮಿಗಿಲಾದ । ಹಿತದವರ ಸೇವೆ ಪ್ರೀತಿಯಿಂದಲಿ ಮಾಡೆ । ಚ್ಯುತವಾಗದ ವಿದ್ಯಾ ಪರಿಪೂರ್ಣವಾಗೋದು । ಕ್ಷಿತಿಯೊಳು ಉತ್ತಂಕ ನೆಂಬುವನಾ ನೋಡು । ಗತಲೋಚನನಾಗಿ ಅಲ್ಲಿಂದ ಗುರುವಿನಿಂದಲಿ ಮಹಾ । ಅತಿಶಯವಾದ ಭೇದವಿದ್ಯಕಲಿತನು । ಚತುರಾ ಮೂರುತಿ ನಮ್ಮ ವಿಜಯ ವಿಠ್ಠಲರೇಯ । ಪ್ರತಿಪ್ರತಿದಿನದಲ್ಲಿ ಜ್ಞಾನವ ಕೊಡುತಲಿಪ್ಪಾ ॥4॥

ಆದಿತಾಳ

ಸುಲಕ್ಷಣ ಗುರುವಿನ ಸಂಪಾದಿಸಿಕೊಂಡು । ಕಾಲಕಾಲಕ್ಕೇ ಮಹಾ ಬುದ್ಧಿವಂತನಾಗು । ಹೇಳಿ ಕೇಳುವದೇನು ಅನ್ಯಮತವೆ ಪೊಂದಿ । ಕೀಳು ಗತಿಗೆ ಪೋಗಿ ಬೀಳದಿರೋ ಮನುಜಾ । ಮೂರ್ಲೋಕದೊಳಗೆ ತಿಳಿ ನಿರ್ಮಲಮರುತಮತ । ಆಲಿಸಿಕೇಳಿದರೆ ವೈಕುಂಠ ಮುಟ್ಟುತಿದೆ । ಏಳಲಾ ಮಾಡದಿರು ಎಲ್ಲ ಕಾಲದಿ ನಿನಗೆ । ಮೇಲು ಮೇಲು ವಿದ್ಯಪ್ರಾಪ್ತವಾಗುವದು । ಪಾಲಸಾಗರಶಾಯಿ ವಿಜಯವಿಠ್ಠಲ ತನ್ನ । ಊಳಿಗದವರೊಡನೆ ವಾಲಗಕೊಡುವನು ॥5॥

ಜತೆ

ಗುರುದ್ವಾರವಿಲ್ಲದೆ ಸಾಧನ ಸಿದ್ಧನಾಗುವನೆ । ಗುರು ವಾಯುವಿಜಯವಿಠ್ಠಲಗೆ ವಂದಿಸಬೇಕು ॥6॥



## ಸುಳಾದಿ ೨

ರಾಗ ಭೈರವಿ ಧ್ರುವತಾಳ

ಗುರುಭಕುತಿ ಪ್ರಧಾನ ಸಾಧನಾ । ಗುರು ಶುಶ್ರೂಷವೆ ಮಹಾಕರ್ಮನಾಶನಾ । ಗುರು ಉಪದೇಶವೇ ಜ್ಞಾನಮಾರ್ಗ । ಗುರುಪ್ರಸಾದ ಲಿಂಗಭಂಗಕೆ ಕಾರಣ ಭಕುತಿ । ಗುರು ಪರಮಾನುಗ್ರಹ ಮಾಡಿದಡಂ । ನಿರುತ ಪಾರ ವಾರ ತತ್ತ್ವ ಪ್ರಮೇಯ । ಕರತಳದೊಳಗಿದ್ದ ತೆರದಿಂ । ಅರುಹುವಾಗುವದು ಮಾನವಂಗೆ । ಸ್ವರೂಪ ಯೋಗ್ಯತಾದನಿತು ಗುರುಭಕುತಿ । ಗುರುಬಲ ವಂದೆ ಇದ್ದಡಂ । ಧರೆ ಎಲ್ಲ ಗೆಲ್ಲವಕ್ಕು ಆವಾಗಂ । ಗುರು ಕರುಣಪಡದಡಂ ಧನ್ಯನೋ । ಗುರುಧ್ಯಾನಮಾಳ್ಪದು ಜನರು । ಗುರು ಚರಣಾಬ್ಜ ಭೃಂಗನಾಗೊ । ಗುರುಗಳಿಗೆ ಸರಿಗಾಣೆನೊ । ಗುರು ವೊಲಿದೆಡೆ ಸರ್ವವಿದ್ಯಪ್ರಾಪ್ತಿ । ಗುರುಮಂತ್ರ ಗುರೋರ್ಜಪ । ಗುರುನಾಮ ಸ್ಮರಣೆ । ಹಿರಿದಾಗಿ ಕೈಕೊಂಡು ಸುಖಿಸುವದು ಜನರು । ಗುರು ಭವಾಂಬುಧಿ ದಾಟಿಪನು ಸಿರಿ ವಿಜಯ ವಿಠ್ಠಲರೇಯನು । ಗುರುವಿಲ್ಲದವನಿಗೆ ವೊಲಿಯನು ॥1॥

ಮಟ್ಟತಾಳ

ದುರುಳ ಏಕಲವ್ಯನು ಏಕಾಂತದಲೊಂದು । ಗುರುಪ್ರತಿಮೆಯನ್ನು ನಿರ್ಮಾಣವ ಮಾಡಿ । ನಿರುತ ಭಕುತಿಯಿಂದ ಶಸ್ತ್ರಾಸ್ತ್ರವಿದ್ಯ । ಹರುಷೋನ್ನತದಿಂದ ಸಂಪಾದಿಸಿಕೊಂಡಾ । ಗುರು ಭಕುತಿಯಿಂದ ಮನುಜಗಾವಲ್ಲ್ಯಾಗೆ । ಸ್ಮರಿಸಿ ಬೇಡಿದ ವಿದ್ಯಪಾಲಿಸುವದೊ ಸತ್ಯ ಮರುಳು । ದುರುಳನಾದರು ಕೇಳು ಮಾಡಿದ ವಿಶ್ವಾಸ । ಬರಿದೆಯಾಗದು ಕಾಣೊ ಮುಕ್ತಿವಂತರಿಗಿದೆ । ವರಮೂರುತಿ ನಮ್ಮ ವಿಜಯವಿಠ್ಠಲರೇಯಾ । ಗುರುದ್ವಾರದಿಂದ ಪೊಳೆವಾ ಪಾಪವ ಕಳೆವಾ ॥2॥

ತ್ರಿವಿಡಿತಾಳ

ಗುರುಗಳು ವರ ಶಾಪಕೊಟ್ಟರಾದಡೆ ಅವನು । ಸುರನರೋರುಗ ಲೋಕ ತಿರುಗಿದರೆ ತೊಲಗುವದೆ । ಸರಸರನೆ ಒಂದೆ ಜನುಮದಲ್ಲಿ ತಿಳಿವದಲ್ಲಾ । ಎರಡೊಂದು ಜನುಮಾಂತರದಲ್ಲಿ ಅನುಭವಾ । ಗುರು ಕರುಣವ ಮಾಡಿದಂತೆ ನಾನಾ ಭೋಗಾ । ಶರೀರವೆ ತೆತ್ತು ಉಣಬೇಕಾ ದ್ವಿವಿಧಾ । ಗುರು ಪ್ರಸಾದದಿಂದ ಮರುತಮತವೆ ಪೊಂದಿ । ಚರಿಸುತಿಪ್ಪ ನರನ ನೋಡಿ ಜನರು ಧರಿಸಲಾರದೆ ಮನುಜನುಡಿದರೇನಾಹದೋ ಕರಣ ಶುದ್ಧವಿಲ್ಲದೆ ಕೆಟ್ಟು ಪೋಪಾ । ಗುರು ಕರುಣ ಬಂದು ಪಾವನಮಾಡಿದ ಮೇಲೆ ದುರಿತದ ಭಯ ದೂಷಣೆ ಭಯವಿಲ್ಲಾ । ಅರರೆ ಅವರ ಅಂತಃಕರಣ ಆವಾವಾ । ಪರಿಯಲ್ಲಿಪ್ಪದೋ ದೂಷಿಸಬಾರದು । ವರಸತ್ಯವತಿ ಸೂನು ನಾನೂರು ಕೋಟಿ ಮೇ

। ಲೆರಡೊಂದು ಹತ್ತು ಕೋಟಿ ಗ್ರಂಥ ಮಾಡಿರೆ । ಹಿರಿಯರು ಪೇಳಿದ ಮಾತಿಗೆ ಮನತೆಗೆದು । ಸರಿ ಬಾರದೆಂದಾಡುವನೇ ಮೂರ್ಖಾ । ಉರಗಶಯನ ನಮ್ಮ ವಿಜಯವಿಠ್ಠಲರೇಯನ । ಪುರವೆ ಬೇಕಾದರೆ ಉತ್ತಮಗುರುಬೇಕು ॥3॥

ಅಟ್ಟತಾಳ

ನದಿಯೊಳಗೊಂದು ಅಸ್ತಿಯ ಹಾಕಿ ತನ್ನಯ ಬದಿಯಲ್ಲಿದ್ದವರಿಗೆ ಮುಟ್ಟಬಾರದು ಬಂ । ತಿದಕೆ ದೋಷವೆಂದು ಪೇಳಿದರಾಮಾತು । ಬುಧರು ಮೆಚ್ಚುವರೇನೊ ಕೇಳಿದಾಕ್ಷಣದಲ್ಲಿ । ಮುದದಿಂದಲಿ ತಮ್ಮ ಗುರುಗಳ ಪಾದ ಧ್ಯಾನ । ಹೃದಂ ಬುದಲ್ಲಿಟ್ಟು ಪೇಳಿದ ಕಾಮ್ಯಕೆಲೇಸಾ । ತುದಿ ಮೊದಲಾದರು ಸಂಶಯ ಬರುವದೆ । ಉದಧಿಯಂತೆ ತುಂಬಿದೆ ನೋಡು ಸತ್ಕೀರ್ತಿ । ಪದೋ ಪದಿಗೆ ಭಗವಂತನ ಸಂಗಡ । ವಿಧಿ ತಪ್ಪದಲೆ ಆಡಿದ ಮಹತ್ಮರು । ನಿದರುಶನ ಇಲ್ಲದಲೆ ಹೇಳರು ಕಾಣೊ । ಎದೆಗುದ್ದಿಕೊಂಡು ಕಸಾವಿಸಿ ಬಟ್ಟರೆ । ಅದರಿಂದೆನಾಹೋದೋ ಮಿಥ್ಯಾವಾದವ್ಯಾಕೆ । ಸದನದೊಳಗೆ ತಾನು ಕಾಣದಿರೆ ಕುರುಡಾ । ಪದುಮಜಾಂಡ ಓರ್ವರು ಕಾಣರೆಂಬಂತೆ । ಮದಡ ಮಾನವನ ಅಟ್ಟಹಾಸವೇನೆಂಬೆ । ನದಿಗೆ ಚಾಂಡಾಲ ಯವನ ಕೋಟಿ ಸಮುದಾಯ । ಅಧಮರು ಬಂದು ನಿಂದಿಸಿ ಬೈದು ಕಾಲಿಲಿ । ವದೆದು ಉಗಳಿದರೆ ದೋಷ ನದಿಗೆ ಉಂಟೆ । ನದಿಸದೃಶವಾದ ಜ್ಞಾನಿಗೆ ಅಣಕ ವಾ । ಡಿದರೆ ಅವಗಿನ್ನು ಕ್ಷುಣೆತಾಬರಲಿಲ್ಲಾ । ಮಧು ವೈರಿ ವಿಜಯ ವಿಠ್ಠಲನ ಪಾದಾಂಬುಜ । ಸದಮಲವಾಗಿ ಭಜಿಸುವರು ಗುರುವೆನ್ನಿ ॥4॥

ಆದಿತಾಳ

ವ್ಯಾಸಮುನಿಯ ಭಾವಗರ್ಭ ಶ್ರೀಮದಾಚಾರ್ಯರು ಬಲ್ಲರಯ್ಯಾ । ವ್ಯಾಸಶಿಷ್ಯರ ಭಾವಗರ್ಭ ಜಯಮುನಿರಾಯ ಬಲ್ಲನಯ್ಯಾ । ಲೇಸು ಜಯಾರ್ಯರ ಭಾವಗರ್ಭ ಮುನಿವ್ಯಾಸರಾಯ ಬಲ್ಲರಯ್ಯಾ ವ್ಯಾಸರಾಯರ ಭಾವಗರ್ಭ ವಿಜಯಿಂದ್ರ ವಾದಿರಾಜರು ಬಲ್ಲರೈಯ್ಯಾ । ಈಸುಜನ ಬಲ್ಲದ್ದು ಕಾಣೋ ಎಣಿಸು ಪುರಂದರದಾಸರ ಇವರೊಳು । ದೇಶದೊಳಗೆ ದಾಸರ ನಿಜ ಭಾವಗರ್ಭ ಲೇಶಬಲ್ಲರು ಅವರ ಅ । ನುಸಾರಿಗಳು ಶ್ರೀಶ ವಿಜಯ ವಿಠ್ಠಲರೇಯಾ । ಕಾಶಿಯೊಳಗಿನ ಮಹಿಮೆಬಲ್ಲಾ ॥5॥

ಜತೆ

ನಮ್ಮ ಗುರುಗಳ ಕವನಾ ಮಿಥ್ಯಾಮತವೆಂದವನು । ಬೊಮ್ಮ ರಕ್ಕಸ ಕಾಣೋ ವಿಜಯವಿಠ್ಠಲಬಲ್ಲಾ ॥6॥



# ಶ್ರೀ ಪುರಂದರದಾಸರ ಸ್ತೋತ್ರ

## ಸುಳಾದಿ 3

ರಾಗ ಭೈರವಿ ಧ್ರುವತಾಳ

ಜಗದ ಪಾವನ್ನದ ಗೋಸುಗವಾಗಿ ಸುರಮುನಿ । ನಗಧರನನ್ನೆ ಭಜಿಸಿ ಸುಗುಣದಲ್ಲಿ । ಮಿಗೆ ಮಾನವರಾಗಿ ಭೂಸುರ ಗರ್ಭದಲ್ಲಿ ಬಂದು । ಅಘದೂರರಾಗಿ ಬಲು ಪಸರಿಸುತ್ತ । ಅಗಣಿತ ಜ್ಞಾನ ಭಕುತಿ ವೈರಾಗ್ಯಪರರಾಗಿ । ಜಗಧರಸುತೆ ಬಳಿಯ ಪಂಚಕೂಟ । ನಗ ಪೊಂಪಾ ನಿಧಿಯಲ್ಲಿ ವಾಸವಾಗಿ ನಿತ್ಯ । ಜಗದಗುರು ವ್ಯಾಸರಾಯರಲ್ಲಿ । ಬಗೆ ಬಗೆಯಿಂದಲಿ ವಿಶ್ವಾಸವನ್ನು ಯಿಟ್ಟು । ಯುಗಳ ಕರವ ಮುಗಿದು ಮುದದಿಂದಲಿ । ಜಗವ ಪಾಲಕ ನಮ್ಮ ವಿಜಯ ವಿಠ್ಠಲನುಪಾ । ಸಿಗನಾಗಿ ವಿಷಯದಲ್ಲಿ ಸಿಗದೆ ಹರುಷದಲಿ ॥1॥

ಮಟ್ಟತಾಳ

ವ್ಯಾಸರಾಯರ ಉಪದೇಶವನ್ನೆ ಕೊಂಡು । ಭಾಸುರ ಜ್ಞಾನಪ್ರಕಾಶಿತ ಮಯದಿಂದ । ವಾಸುದೇವನ ಪಾದ ಸರಸಿಜ ಹೃದಯಾಕಾಶದಲಿ ನೋಡಿ । ಮೀಸಲ ಮತಿಯಲ್ಲಿ ದೇಶದೊಳಗೆ ಮೆರೆದು ನಾಶರಹಿತ ರಂಗ ವಿಜಯ ವಿಠ್ಠಲನ್ನ । ದಾಸರೆಂದರೆ ಪುರಂದರ ದಾಸರೆಂದೆನಿಸುತ್ತ ॥2॥

ರೂಪಕತಾಳ

ಪವನ ಮತವನುಸರಿಸಿ ನವ ನವವನುಧರಿಸಿ । ಶ್ರವಣ ಮನನ ಧ್ಯಾನವನು ಅಂಗೀಕರಿಸಿ । ಅವನಿಯೊಳಗೆ ಹೀನ ದೈವವೆ ನಿರಾಕರಿಸಿ । ಜವನ ದೂತರಿಗೆ ಭಯವನೆಲ್ಲ ತೋರಿಸಿ । ಭವ ರೋಗಗಳು ಪರಾಭವ ಮಾಡಿ ದೂರಿರಿಸಿ । ಕವಿಗಳ ಮನದ ತಾಪವನು ಪರಿಹರಿಸಿ । ಕವನಕ್ಕೆ ಸರಿಯಿಲ್ಲೆಂದವನಿಯೊಳಗೆ ಮೆರಸಿ । ಕವಿತಾ ಜನರ ಪ್ರೀಯ ವಿಜಯ ವಿಠ್ಠಲರೇಯ । ದಿವಿಜಾದ್ಯರೊಳು ದೈವವೆಂದು ಪತಿಕರಿಸಿ । ಸವಿನುಡಿಯಿಂದ ನಮ್ಮನ್ನೆಲ್ಲ ಉದ್ಧರಿಸಿ ॥3॥

ಝಂಪಿತಾಳ

ಲಕ್ಷದೆಪ್ಪತ್ತೈದು ಸಾವಿರ ಪದಗಳು ಪುಣ್ಯಕ್ಷೇತ್ರ ತೀರ್ಥಾದಿ ಮಹಿಮೆಯನೆ ಪೇಳಿ ಪ್ರ । ತ್ಯಕ್ಷವಾದ ಗುರು ಮಧ್ವರಾಯರ ಮಹಿಮೆ । ಲಕ್ಷಣಯತಿಗಳ ಸಂತತಿ ತಂತ್ರಸಾರೋಕ್ತ । ಈ ಕ್ಷಿತಿಯೊಳಗೆ ತರತಮ್ಯ ಗುರುಧ್ಯಾನಾ । ಧ್ಯಕ್ಷ ಅವರವರು ಮಾಡುವ ಮೂರುತಿ

ಧ್ಯಾನ । ತೀಕ್ಷ್ಣದಿಂದಲೆ ಅವರವರ ಚಾರಿತ್ರೆ । ಅಕ್ಷಯದಿಂದ ಇಪ್ಪತ್ತೈದು ಸಾವಿರ । ಅಕ್ಷರಾಕ್ಷರ ಪುರುಷ ವಿಜಯ ವಿಠ್ಠಲನೆಂದು । ದ್ರಾಕ್ಷಾಪಾಕದಂತೆ ಪೇಳಿದರು ಮುಂದೆ॥4॥

ತ್ರಿವಿಡಿತಾಳ

ಸುಳಾದಿಗಳು ಅರವತ್ತು ನಾಲ್ಕು ಸಾವಿರ । ಬಲುವೃತ್ತ ನಾಮ ಮುವತ್ತಾರು ಸಾವಿರ । ಸಲೆ ಶ್ವೇತ ದ್ವೀಪಾನಂತಾಸನ ವೈಕುಂಠ । ನಳಿನಜ ನಗರ ಕೈಲಾಸ ದಿ । ಕ್ಪಾಲರ ನಿಲವರ ಪೇಳುವೆನು ಅರವತ್ತು ಸಾವಿರ ಒಲಿದು । ಕೇಳಿ ದಶಕಲ್ಯಾಣ ದಶಚರಿತೆ ತಿಳಿವದು ನಲವತ್ತು ಸಾವಿರ ನಿಜವೆಂದು । ಇಳಿಯ ವಲ್ಲಭರಂಗ ವಿಜಯ ವಿಠಲನ್ನ । ಕಲ ಕಾಲ ಮನದೊಳು ನಿಲಿಸಿ ಕೊಂಡಾಡುತ್ತ ॥5॥

ಅಟ್ಟತಾಳ

ನಿಷ್ಠ ಅಹನ್ನೇಕ ಏಕಾದಶಿ ಜನ್ಮ । ಅಷ್ಟಮಿ ನಿರ್ಣಯ ಗಂಡಿಕೆ ಶಿಲೆಗಳ । ನಿಷ್ಠ ಶೋಧಕ ಉಗಾಭೋಗಾದಿ । ಕಷ್ಟಹರ ಚಿಲ್ಲರ ಕಥೆ ಪೀಯುಷ । ವಷ್ಟು ಎಪ್ಪತ್ತೈದು ಸಾವಿರ ಮಿಳಿತವು । ಸೃಷ್ಟಿಯೊಳಗೆ ಎಲ್ಲ ಗಣಿತ ಮಾಡಲಾಗಿ । ಮೆಟ್ಟಿಕಿ ಪಾದ ಕಡಿಮೆ ಐದುಲಕ್ಷ । ಯಿಷ್ಟಾದವು ದಾಸರು ಪೇಳಿದ ಪದ । ಯಿಷ್ಟ ದೈವನಾದ ವಿಜಯ ವಿಠ್ಠಲ ಹರಿಯ । ಗುಟ್ಟಿನಿಂದಲಿ ಸಲಿಸಿ ಕುಣಿಕುಣಿಸುತಲಿ ॥6॥

ಆದಿತಾಳ

ಭಕ್ತಿಗೆಲ್ಲಿ ಸರಿಗಾಣೆ । ಮುಕ್ತಿಗೆಲ್ಲಿ ಸರಿಗಾಣೆ । ಮುಕ್ತಾರ್ಥ ಹರಿ ಪಾದಾಸಕ್ತರಾಗಿ ಧೇನಿಸುತ್ತ ರಕ್ತಾಕ್ಷಿ ವತ್ಸರದ ಅರ್ಕವಾರಯಿಂದು ಕ್ಷಯ । ಸೂಕ್ತ ಪುಷ್ಯಮಾಸದಿ ಉದ್ಯುಕ್ತರಾಗಿ ಪುಷ್ಪಕದಿ । ವ್ಯಕ್ತವಾಗಿ ಪೊಳೆದು ಮಧುರೋಕ್ತಿಯಲ್ಲಿ ತರಣಿಯಂತೆ । ಮುಕ್ತಿಗೆ ಸಾರಿದರು ವಿರಕ್ತಿಮಾರ್ಗವನ್ನು ಪಿಡಿದು । ಮುಕ್ತ ಮುಕ್ತಾಶ್ರಯ ನಮ್ಮ ವಿಜಯ ವಿಠ್ಠಲರೇಯನ । ಶಕ್ತನೆಂದು ಪೊಗಳಿ ಬಲುರಿಕ್ತರಿಗಾಧಾರವಿತ್ತು ॥7॥

ಜತೆ

ಈಸು ಪದಗಳೊಮ್ಮೆ ನೆನಸಿದ ಮನುಜನ್ನ । ದಾಸರ ಪೊರೆದಂತೆ ಪೊರೆವ ವಿಜಯ ವಿಠ್ಠಲ ॥8॥



## ಸುಳಾದಿ 4

### ಧ್ರುವತಾಳ

ಗುರು ದಾಸರಾಯರೆನಗೆ ದಾಸತ್ವ ನೀಡೋಕ್ರಮ । ಕರುಣದಿಂದಲಿ ವ್ಯಾಸ ಕಾಶಿಯಲ್ಲಿ। ಹರುಷದಿ ಮನ ಮುಟ್ಟಿ ಪೇಳಿದ್ದೆ ಪೇಳುವೆನು । ನರ ಶಿರೋಮಣಿಗಳು ಕೇಳುವದು । ಸಿರಿ ಮಧ್ವಮುನಿಕೃತ ಸಿದ್ಧಾಂತ ಸಾರವನ್ನು ಗುರು ವ್ಯಾಸಮುನಿ ಮುಖದಿಂದ ತಿಳಿದುಕೊಂಡು । ತರತಮ್ಯ ಪಂಚಭೇದ ಮೊದಲಾದ ತತ್ವಗಳ । ಪರಿಶೋಧನವಗೈದು ಮಂದರಿಗೆ । ಹರಿಕರುಣವ ಮಾಳ್ಪ ತತ್ವ ರಹಸ್ಯವನ್ನು। ಪರಿಪರಿ ಸುಳಾದಿ ಪದಮುಖ ಪ್ರಾಕೃತದಿ । ಸಿರಿ ವಿಜಯ ವಿಠಲನ ಪ್ರೀತಿಗೋಸುಗ । ಪಾದೋನ ಪಂಚಲಕ್ಷ ಪೇಳಿಹೆಂದು ॥1॥

### ಮಟ್ಟತಾಳ

ಪಾದಪೂರೈಸುತ ಮೋದ ಸಂಸ್ಕೃತವೆಂದು ಸಾದರದಲಿ ಪಠಸಿಭೂಧರ ವಿಜಯ ವಿಠಲನ್ನ। ಪಾದವನೆ ಕಾಂಬುವದು ಸತ್ಯಸತ್ಯ ॥2॥

### ತ್ರಿವಿಡಿತಾಳ

ಮುನಿಮಧ್ವ ಹೃದಯವೆ ಪಾಕೃತ ಗ್ರಂಥವಿದು ॥ ಜನರಿಗೆ ಪೇಳಬೇಕಾದದೆ । ಘನವಾದ ತೈತರೇಯದಲ್ಲಿ ಪೇಳಿದ ಶಾಂತಿ । ಮನದಿ ಪೇಳಿಸುತ್ತ ತತ್ವಗಳ । ಅನುವಾಗಿ ತಿಳುಸುತ್ತ ಶ್ರೀನಿವಾಸನ ಪಾದ । ವನರುಹ ತೋರಬಹುದು ನಂಬಿದವರಿಗೆ। ವನಜ ನಾಭನ ಪಾದ ತೂತಿಪಂಥ ಶಕ್ತಿಗೆ । ಘನಪದ ರೂಪದಂಕಿತವು ಕೊಟ್ಟು ಮತ್ತು ಅನುನಯದಿಂದ ಶಾಂತಿ ಪೇಳಿಸಿ ತತ್ವಗಳು । ಮನದಿಂದಲಿಹಬಹುದು ಸುಗುಣರಿಗೆ । ಮನುಜರಿಗಂಕಿತವು ಶಾಂತಿಯು ಇಲ್ಲದಲೆ । ಅನುವಾಗಿ ಪೇಳ್ದ ತತ್ವಗಳು ವ್ಯರ್ಥಕಾಣೋ । ದನುಜದಲ್ಲಣ ವಿಜಯ ವಿಠಲನ್ನ ದಾಸತ್ವ। ತನ ಧರಿಸೋದು ಬಹುಕಷ್ಟ ಕಷ್ಟವೆಂದು॥3॥

### ಅಟ್ಟತಾಳ

ಸ್ವಾತಂತ್ರದಾಸನು ತುತಿಸಲು ಫಲವೇನು । ಸತತ ಮಾಡುವ ಪುಣ್ಯ ಜಿತಕೆ ನಿಲ್ಲದಲೆ ಅ । ಸತಿಯ ವ್ರತದಂತೆ ಚ್ಯುತವಾಗಿ ಪೋಪದು । ಗತಿಗೆ ಸಾಧನವಿಲ್ಲ ರತಿ ಪತಿಪಿತ ನಮ್ಮ ವಿಜಯ ವಿಠಲನ್ನ ಅತಿ ದಯೆ ಪಡೆದವರ ಶಿಷ್ಯನಾಗದೆ ಗತಿಯಿಲ್ಲ ॥4॥

### ಆದಿತಾಳ

ಗುರುದ್ವಾರವೆ ಗತಿ ಎಂಬ ಮಾನವನಿಗೆ । ಪರಮ ಶಾಂತನಿಗೆ ವರ ವೈಷ್ಣವನಿಗೆ । ದುರಬುದ್ಧಿ ಇರದವಗೆ ನಿರತ ಶಿಷ್ಯನಿಗೆ । ಉರುತರ ತತ್ವಗಳು ಅವಿರತ ಪೇಳಲು । ದೊರೆವನಾಕ್ಷಣದಲ್ಲಿ ವಿಜಯ ವಿಠಲರೇಯ । ಪರಮ ಹರುಷ ಪಟ್ಟು ನಲಿದಾಡುವನೆಂದು॥5॥

### ಜತೆ

ಗುರುರಾಯರಾಜ್ಞ ಸ್ವೀಕರಿಸುವ ನರರಿಗೆ । ಸಿರಿ ವಿಜಯ ವಿಠಲನೆ ಪೊಳೆವನು ನಿಶ್ಚಯ ॥6॥



## ಸುಳಾದಿ 5

### ಧ್ರುವತಾಳ

ದಾಸ ಪುರಂದರರನ ಪಾದವನು ಪೊಂದಿದೆನು । ಏಸು ಜನುಮದ ಪುಣ್ಯರಾಶಿ ಫಲಿಸಿತೊ ಎನಗೆ । ಕಾಶಿಗಾಗದವನು ಸಾಸಿರಕೆ ಬೆಲೆಯಾದೆ । ಸೂಸುವ ಭಕುತಿಯಲ್ಲಿ ಶ್ರೀಶನ ನಾಮ ಪೀ । ಯೂಷವನ್ನುಂಡೆನೊ ಉಚಿತ ಸಾಧನದಿಂದ । ಲೇಸಾಗಿ ಪುರಂದರ ದಾಸರನ ಪಾಲಿಸಿದ । ಸಾಸಿರ ಪಾದ ನಮ್ಮ ವಿಜಯ ವಿಠಲನ । ದಾಸರ ದಾಸನಾದೆ ದೋಷವಿರಹಿತನಾದೆ ॥1॥

### ಮಟ್ಟತಾಳ

ಇಂದಿನ ದಿನವಾನಂದದ ದಿನವು । ಇಂದಿನದಿನಮಾನಂದದ ದಿನವು । ರಂದರ ದಾಸರು ಇಂದುವಿನಂತೆ । ಬಂದೆನ್ನ ಕಣ್ಣು ಮುಂದೀಗ ಸುಳಿಯಲು । ಸಂದರುಶನದಿಂದ ದಣಿದೆ ನಾರಂದವರದ ಪು । ರಂದರ ವಿಜಯ ವಿಠಲನ ಕರುಣಾ । ಸಿಂಧುವಿನೊಳಗೆ ನಾ ಪೊಂದಿದೆ ಮಿಂದೆನೊ ॥2॥

### ತ್ರಿವಿಡಿತಾಳ

ಸುರಲೀಲನಾಗಿ ನಿಕಂಪ ನೆಂದನಿಸಿ ದ್ವಾ । ಪರದಲ್ಲಿ ಜನಿಸಿದೆ ಕೆಲವು ದಿನ ಬಿಡದೆ । ತರುವಾಯ ವರ ಕಲಿಯುಗದಲ್ಲಿ ಈಗ ಜನನ । ಮರಣವಾಗುತ ಬಂದು ಧರೆಯೊಳಗೆ ಮೆರೆದು । ಹರಿಕೃಪೆಯಿಂದಲಿ ಇವರ ಸದನದೊಳು । ತುರ ಕರುವು ಆಗಿ ಜನಿಸಿದೆನು ಸುಕೃತದಿಂದ । ಸಿರಿಪತಿಸ್ಥ ವಿಷ್ಣು ನಮ್ಮ ವಿಜಯ ವಿಠಲನ್ನ ದಾ । ಸರು ಪೇಳಿದ ಕವನ ಎರಗಲು ಕರ್ಣಕ್ಕೆ ॥3॥

### ಅಟ್ಟತಾಳ

ಶ್ರವಣ ಫಲದಿಂದ ಅವನಿಯೊಳಗೆ ಎರಡು । ಅವನಿ ಸುರರ ಜನ್ಮವನೀಗ ಧರಿಸಿದೆ । ಕವನ ಪೇಳಿದೆ ಸಂಸಾರದಲ್ಲಿ ಇದ್ದು । ಅವಸರನಾಗಿ ಅವಧಿ ಇಲ್ಲದೆ ಮತ್ತೆ । ಅವನಿಯೊಳಗೆ ಬಂದೆ ಭವ ದೂರನಾಗಿ । ಕವಿನಾಮ ವಿಜಯ ವಿಠಲನ್ನ ದಿವ್ಯ ನಾ । ಮವನು ಕೊಂಡಾಡುವ ಅಧಿಕಾರಿನಾನಾದೆ ॥4॥

### ಆದಿತಾಳ

ಎಪ್ಪತ್ತು ಮೂರು ವರುಷ ಹೊಪ್ಪಾದೇಹದಲ್ಲಿದ್ದೆ । ಯಿಪ್ಪ ಕಾಯದಲಿ ಅದರಪ್ಪಂತೆ ಬಾಳಿ ತಿರುಗಿ ಇಪ್ಪತ್ತುವೊಂದು ದಿನ ತಪ್ಪದಲೆ ಸುಲಭ ನರಕ । ಒಪ್ಪದಲೆ ನೋಡಿ ತಿರುಗಿ ಬಪ್ಪೆನಯ್ಯ ಧರಿಗೆ । ಅಪ್ಪಾನಪ್ಪಮಹಿಭರ್ತ ವಿಜಯ ವಿಠಲ ಒಲಿ । ದಿಪ್ಪನು ಇಂದಿನಕಿಂತಧಿಕವಾಗಿ ಎನಗೆ ಬಿಡದೆ ॥5॥

### ಜತೆ

ಗುರು ಕೃಪೆ ಯಿಂದಲಿ ಅರಿದೆ ಈ ತೆರದಿಂದ । ಪರಮಾತ್ಮ ವಿಜಯ ವಿಠಲನಂಘ್ರಿ ಸೇರಿದೆನೊ ॥6॥

## ಸುಳಾದಿ 6

### ಧ್ರುವತಾಳ

ಯಾತರ ಒಳಗೆ ಗಣನೆ ಎನ್ನಯ ಸ್ವರೂಪ ಬಲು । ಜಾತಿಯಲ್ಲಿ ಪುಟ್ಟಿ ಬಂದದಿದ ಕೊ । ಪಾತಕ ಪುಂಜವಾದ ಪಾಮರ ನಾನಾಗಿ । ಪೋತ ತನ ದಾರಭ್ಯ ಪುಣ್ಯವರಿಯೇ ।ಯಾತಕ್ಕೆ ಬಾತಿಯಲ್ಲಾ ಮೂರಕ್ಕೆ ವಶವಾಗಿ ಸೋತು ತಿರಗು ತಿಪ್ಪೆ ಚಾತುರದಲ್ಲಿ। ಚೇತನ ಮತ್ತಾವದೊ ಅವಿದ್ಯಾವರ್ಕವಾಗಿ । ಈ ತೆರದಲ್ಲಿ ಬಿಡದೆ ಸುತ್ತುತ್ತಿಪ್ಪಾದದಕೊ । ಮಾತು ವಂದು ಪೇಳುವ ಸ್ವಾತಂತ್ರತನ ಕ್ಷಣ । ಮಾತುರ ಎನಗುಂಟೆ ಪೇಳಿರಯ್ಯ । ಭೂತಳದೊಳ ಗಾನು ಜನುಮ ಜನುಮಾ ಪಂ । ಡಿತ ವ್ಯಾಖ್ಯಾತ ವಿದ್ಯಾವಂತನಲ್ಲ ಸಂ । ಗೀತ ಗಾಯಕನಲ್ಲಿ ಧರ್ಮದಾನಂಗಳಿಲ್ಲ । ಗಾತುರದಂಡಿಸಿ ಯಾತ್ರಿ ತೀರ್ಥ । ವಾ ತಿರುಗಲಿಲ್ಲ ಆಚಾರವಂತನಲ್ಲ- ಚಾತುರ್ಮಾಸಾದಿ ವ್ರತಗಳೊಂದು ಯಿಲ್ಲ । ಯಾತಕ್ಕೆ ಪೊಂದದ ಕೇವಲ ಮೂಢ ನಾನು । ಆತುಮ ಯಾತರದೊ ಆದಿಯಲ್ಲಿ। ಮಾತಿಗುತ್ತರ ನರಿಯೆ ಆರಾರರ್ಚಿಸುವ ಮೂ । ರೂತಿಯಾನೀಕ್ಷಿಸಿ ಪೇಳಲೊಶವೆ । ಸೋತ್ತುಮ ನವನಯ್ಯ ಈಪರಿ ನಿರ್ಣಯ । ವಾರ್ತೆ ತಿಳಿದು ಪೇಳುವನಾಗೆ ಗು । ಪೂತಾದಲ್ಲಿಪ್ಪಾನು ಬಾಹಿರಕ್ಕೆ ಬಾರನು । ಖ್ಯಾತಿಯಾಗನು ಕಾಣೋ ಜಗದೊಳಗೆ ಆತುಮ ಸ್ತುತಿ ಇಲ್ಲ ಒಬ್ಬರನಿಂದಿಸಾನು । ವಾತಾದೇವನ್ನ ಮತವನುಸಾರಿಯಿಪ್ಪಾ। ಈ ತೆರದಲ್ಲಿ ಕಾಲ ಕಳದವನೆ ಧನ್ಯ । ದಾತನು ಆವಾ ನಮ್ಮ ಕುಲ ಕೋಟಿಗೆ । ಶಾತ ಕುಂಭಾವರ್ನಾ ವಿಜಯ ವಿಠಲ ಬೇ । ನ್ನಾತು ಕಾವುತಲಿಪ್ಪ ಈ ಪರಿವುಳ್ಳವರನಾ ॥1॥

### ಮಟ್ಟತಾಳ

ಮೇದಿನಿಯೊಳಗಂದು ವ್ಯಾಸಮುನಿ ನಿತ್ಯ । ಮೋದ ಮನಸು ಉಳ್ಳಾ ಪುರಂದರ ದಾಸರು । ವಾದಿರಾಜಸ್ವಾಮಿ ಬಲು ಜನ ಆದ್ಯರು । ಭೆದಿಸಿದ್ದರು ಶ್ರೀನಾರಾಯಣ ಯೋಗಿ । ವೇದವೇದಾಂತರು ಯಿವರಿವರು ಕಾಣೋ । ಸಾಧುಜನರು ಎನ್ನಿ ಯಿವರಿವರಿಂದಲಿ । ಆದ ಶಿಷ್ಯರು ಮತ್ತೆ ಕೆಲವರು ನಂದನರು । ಮೇಧಾದಿಗೆ ಅಧಿಕಾರಿ ಎನಿಸುವ ಶ್ರೀಹರಿಯ । ಪಾದ ಸ್ಮರಣೆಯೆಂಬೊ ಪರಿ ಪರಿ ಬಗೆಯಾ । ರಾಧನೆಯ ಮಾಡಿ ಭಕುತಿಯಿಂದಲಿ ಬೇ । ಕಾದುದನೆ ಸವಿದು ಮಿಕ್ಕ ಪದಾರ್ಥ । ಈ ಧರಿ ಮೇಲಿಟ್ಟು ಮುಂದಣಾಗಮ ತಿಳಿದು ಪೋದರು ಸದ್ಗತಿಗೆ । ಮಾಧವ ಮೂರುತಿ ವಿಜಯ ವಿಠಲ ಜಗಕೆ । ಆದಿ ದೈವವೆಂದು ಕೊಂಡಾಡಿ ನಗುತಾ ॥2॥

### ತ್ರಿವಿಡಿತಾಳ

ಹರಿನಾಮಾ ರಸವೆಂಬೊ ರುಚಿ ಪದಾರ್ಥಂಗಳು । ಗುರು ವ್ಯಾಸಮುನಿ ಮಿಕ್ಕಾ ದಾಸ ಜನರು । ಮರುತ ಪ್ರೇರಣೆಯಿಂದ ಸುರಿದು ಮದವೇರಿದ । ಕರಿವಿಂಡಿನಂತೆ

ಚರಿಸಿದರು ಕಾಣೋ । ದುರುಳ ರೆದೆಯಮೆಟ್ಟಿ ದುಸ್ಸಂಗವನು ಜರಿದು । ಹರಿ ಸರ್ವೋತ್ತಮನೆಂದು ಕೂಗುತಲಿ । ಹರಿದಾಡಿ ಓಡಾಡಿ ಬೀದಿ ಬೀದಿಯೊಳಗೆ । ತಿರುಗುತಲಿಪ್ಪರು ಕರಿಗಳಂದದಲಿ । ಧರೆಮ್ಯಾಲೆ ಸೂರಿದು ಆ ಪದಾರ್ಥದ ಚೂರು । ಇರುವು ಮೊದಲಾದ ಜೀವರಾಶಿ । ಹರಿದು ಪೋಗುತ ನಿಂದಾರಿಸಿಕೊಂಡು ಸವಿದುಂಡು । ಪರಮ ತೃಪ್ತಿಗಾಗಿ । ಬಾಳಿದಂತೆ ಧರಿ ಮೇಲೆ ಕವನ ಪೇಳುವ ಬಲು ಜಾಣರು । ಅರಿಯಾರು ಪೊಸ ಬಗೆ ಮಾತುಗಳು । ಪರಿ ಪರಿ ಚಾತುರ್ಯದಿಂದ ಪೇಳಿದರೇನು । ಹಿರಿಯರಂದದರೊಳಗಿದು ಸಿದ್ಧವೋ । ಇರವು ಮೆದ್ದುದರಿಂದ ಕರಿವಿಂಡಿಗೆ ಏನು । ಕೊರತೆಯಾಗದು ಕೇಳಿ ಜ್ಞಾನಿಗಳು । ಶರಣರ ಪರಿಪಾಲ ವಿಜಯ ವಿಠಲ ರೇಯ । ಎರವು ಮಾಡದೆ ಕಾವಾ ಹಿರಿಯರ ಪೊಗಳಲು ॥3॥

ಅಟ್ಟತಾಳ

ವ್ಯಾಸಮುನಿ ಮಿಕ್ಕಾದ ಹರಿದಾಸರು । ಬೀಸುರಿಗೆ ಯಣ್ಣೂರಿಗೆ ಶಾವಿಗೆ । ಸೂಸಲು ಗಡಬು ಮಂಡಿಗೆ ಭಕ್ಷ ಅಪ್ಪಾಲು । ಲೇಸಾದ ಗುಳ್ಳೂರಿಗೆ ಮೆತ್ತನ ದೋಸೆ । ರಾಸಿ ದಧ್ಯಾನ್ನ ಪರಮಾನ್ನ ವಾರನ್ನ । ಆಸಾರಾಳಿಗೆ ಮತ್ತೆ ಗವಲಿ ಪರಡಿ ಫೇಣಿ । ಸೀಶಾಖ ಮಿಕ್ಕಾದ ಪದಾರ್ಥಂಗಳು ಯೆಲ್ಲ ತಾಸವಿದು ಅದರೊಳಗೆ ಪುರಂದರ । ದಾಸರು ಗೋಘೃತ ವೆಂಬೋದೆ ಭುಂಜಿಸಿ । ಈಸುಜನಂಗಳು ಪರಮ ತೃಪ್ತಿಯಾಗಿ । ದೇಶದೊಳಗಿದ್ದು ಹೆಚ್ಚಾದ್ದವರ ಪೀ । ಯೂಷ ಹರಿನಾಮವೆಂಬೊ ಪದಾರ್ಥ ವುಳೀಸಿ ಪೋದರು ಕಾಣೆ ಭೇದ ಬಲ್ಲವರಿಗೆ ಲೇಶ ನಾನದರೊಳಗವರವರುಂಡದ್ದು ಮೀಸಲು ವಾಗಿರೆ ನೋಡಿ ತೆಗೆದುಕೊಂಡು ಲೇಸಾಗಿ ಘೃತದ ಸಂಗಡ ಭುಂಜಿಸು ವೇನಯ್ಯ । ಈ ಸುಖವ ಕಂಡವರಿಗೆ ದೊರಕುವದೇನೊ । ಶಾಶ್ವತ ಮೂರುತಿ ವಿಜಯ ವಿಠಲರೇಯ । ನಾಶವಿಲ್ಲದ ಜ್ಞಾನ ಕೊಟ್ಟು ರಕ್ಷಿಸುವ ॥5॥

ಆದಿತಾಳ

ಇಂಥ ಹರಿದಾಸರು ಮಿಗಿಸಿದ್ದ ಪ್ರಸಾದ । ಯಿಂತು ಎನಗೆ ಬಂದು ಪ್ರಾಪುತವಾದಮೆಲೆ । ಚಿಂತೆ ಯಾತಕೆ ಮನವೆ ಆನಂದತೀರ್ಥರ । ಗ್ರಂಥದಲ್ಲಿಗೆ ಸಮ್ಮತವಾಗಿಯಿಪ್ಪದು । ಪಂಥವಾಡುವ ಜನರು ಆಡಿಕೊಳ್ಳಲಿ ಅವರ । ಪಂಥ ಪೊಗದಲಿರು ಕಂಡರೆ ಕೆಲಸಾರು । ಕಂತು ಜನಕ ರಂಗ ವಿಜಯ ವಿಠಲ ತಾನೆ । ಚಿಂತೆ ಮಾಡುವ ತನ್ನ ನೆನಸಿದ ಭಕ್ತನಿಗೆ ॥5॥

ಜತೆ

ಹರಿ ಪ್ರಸಾದಾದವಗೆ ಅವದಾದರು ಕಡಿಮೆ । ನರರಿಗೆ ಆಗುವದೆ ವಿಜಯ ವಿಠಲ ಪೊಳೆವ ॥6॥



## ಸುಳಾದಿ 7

### ರಾಗ ಪಂಥವರಾಳಿ ಧ್ರುವತಾಳ

ಆವ ಜನುಮದಲ್ಲಿ ಸ್ನಾನ ಮಾಡಿದಿನೊ । ಆವ ಜನುಮದಲ್ಲಿ ದಾನವ ಮಾಡಿದಿನೊ । ಆವ ಜನುಮದಲ್ಲಿ ಮೌನ ಮಾಡಿದಿನೊ । ಆವ ಜನುಮದಲ್ಲಿ ಗಾನ ಮಾಡಿದಿನೊ । ಆವ ಜನುಮದಲ್ಲಿ ದ್ಯುಸರಿತುಮಿಂದೆನೊ । ಆವ ಜನುಮದಲ್ಲಿ ಯಾತ್ರೆ ಚರಿಸಿದೆನೊ । ಆವ ಜನುಮದಲಿ ವೇದ ಓದಿದಿನೊ । ಆವ ಜನುಮದಲಿ ಆ ಧರ್ಮಾದಿ ನಡೆದೆನೋ । ಆವಜನುಮದಲಿ ಗುರುಸೇವೆ ಮಾಡಿದೆನೋ । ಆವಜನುಮದಲ್ಲಿ ಸಂತರಲ್ಲಿದ್ದಿನೊ । ಆವಜನುಮದಲ್ಲಿ ಯಾಗವ ರಚಿಸಿದೆನೋ ಆವ ಜನುಮದಲ್ಲಿ ಸತ್ಕರ್ಮಚರಿಸಿದಿನೊ । ಆವ ಜನುಮದಲ್ಲಿ ವಾಯುಮತ ಪೊಂದಿದಿನೊ । ಆವ ಜನುಮದಲಿ ಶ್ರವಣವ ಕೇಳಿದಿನೊ । ಆವ ಜನುಮಗಳಲಿ ಧ್ಯಾನಂಗಳೈದಿದೆನೊ । ಆವ ಜನುಮದಲ್ಲಿ ಅವಾವದರ್ಚಿಸಿದಿನೊ । ನಾವಂದದರೊಳಗೆ ಗೆರೆ ಗೊಯ್ಯಲರಿಯೆ । ಆವ ಕರ್ಮವೊ ಮತ್ತಾವಾವ ನಡತಿಯೊ । ಆವದಾವದೊ ಎನಗೆ ಈ ಪುಣ್ಯ ಫಲಿಸಿತು । ಪಾವನನಾನಾದೆ ದಾಸರದಯದಿಂದ ಕೈವಲ್ಯನಾಥ ಸಿರಿ ವಿಜಯ ವಿಠಲರೇಯ ಭಾವಬಲ್ಲನೊ ಮಹಿಮಕಾವನು ಪ್ರತಿದಿನ ॥1॥

### ಮಟ್ಟತಾಳ

ನರಸಿಂಹ ವೈಕುಂಠ ನರಹರಿ ಯೋಗೇಂದ್ರ । ಸಿರಿ ಸುಲಭ ಸೊಬಗು ವರದ ಅಚಲಾನಂದ । ಅರವಿಂದನಾಭ । ಹರಿವ್ಯಾಸ ಕೃಷ್ಣ ವರ ದಾನಿ ಚನ್ನ । ಸಿರಿಪತಿ ಚಲುವ ಶ್ರೀಕರ ಶೃಂಗಾರ ಸುಂ । ದರ ಬೋಧಪತೆ ಗುರು ಅಚ್ಯುತ ಚತುರ ಮಧ್ವಪತಿ । ಗರುಡವಾಹನ ಮುದ್ದು ಪರಿಪೂರ್ಣಾನಂತ ದಾರಿಪನ ಶ್ರೀ । ಧರ ಪಾಂಡುರಂಗ ಚರಿತಾನಂದ ವಿ । ಸ್ತರವಾದ ಬಲು ಶಿರಿ ಪರಿಯಂತ ಪೇಳಿ ಅಂಕಿತವ ಸರಸದಲಿ ಪೇಳಿ ಪರಮ ಭಕುತಿಯಲ್ಲಿ ವಿಜಯ ವಿಠಲನ್ನ ಸ್ಮರಣೆ ಮಾಡಿದರು ಆದ್ಯರು ನಿರ್ಮಳರಾಗಿ॥2॥

### ತ್ರಿವಿಡಿತಾಳ

ಇವರು ಈ ಪರಿಯಲ್ಲಿ ಅಂಕಿತವನು ಹಾಕಿ । ಅವನಿಯೊಳಗೆ ಸಂಚರಿಸುತ್ತಲಿರಿಲಿತ್ತಲು ಭವದೂರರಾಗಿ ದಾಸರು ತಮ್ಮ ಸುತರೊಡ । ನೆ ವಿರಚಿಸಿದರು ಪುರಂದರ ವರದ ಗುರು ಅಭಿನವ ಗುರುಮಧ್ವಪತಿ ಎಂಬಾಂಕಿತದಿಂದ । ವಿವರಣೇ ಮಾಡಿ ಲೋಕವನು

ಉದ್ಧರಿಸೆ । ಅವರವರು ಎಲ್ಲಾ ಅತಿ ದಯಾಪರರಾಗಿ । ಭವಿಷ್ಯೋತ್ತರ ತಿಳಿದು ಎನಗೆ ಒಂದು ಕವನಕ್ಕೆ ನೆಲೆ ಮಾಡಿ ಪೋಗಿದ್ದರದರಿಂದ । ಹವಣ ತಿಳಿದೆನೊ ಗುರುಗಳ ಕರುಣದಿಂದ । ಜವನ ಬಾಧೆಯ ಕಳೆವ ವಿಜಯ ವಿಠಲನ್ನ । ಅವಸರದಲಿ ನಾ ಚರಣವ ನಂಬಿದೆನೊ ॥3॥

ಅಟ್ಟತಾಳ

ಕಳಸ ಜನರು ಪೋಗುತಲೊಂದು ಮನದೊಳು । ತಿಳಿದು ವಂದಾಲದೆಲೆಯನ್ನು ನಿಜ ಶಿಷ್ಯ । ಫಲು ಗುಣೆಗಿಟ್ಟ ತೆರದಂತೆ ಎನಗೊಂದು । ಉಳಹಿ ಪೋದರು ಅಂಕಿತಕ್ಕೆ ವಿಜಯ ವಿ । ಠ್ಠಲನೆಂಬೊ ನಾಮ । ಶ್ರೀಹರಿ ದಯದಿಂದ । ನೆಲೆವಂತ ನಾನಾದೆ ದುರುಳರ ಜರಿದು । ಹಲವು ಬಗೆ ದೈವ ವಿಜಯ ವಿಠ್ಠಲನ್ನ । ಸಲೆ ಸ್ತೋತ್ರವನು ಪೇಳಲದರಿಂದ ಬಲು ಧನ್ಯ ॥4॥

ಆದಿತಾಳ

ದಾಸರು ಮೊದಲಾದ ಜ್ಞಾನಿಗಳ ಕವಿತಾ । ದೇಶದೊಳಗೆ ರವಿ ಭಾಸದಂತೊಪ್ಪುತಿರೆ ಲೇಶ ಬುದ್ಧಿಗನು ಹರಿ ಪ್ರೇರಣೆಯಿಂದ । ದಾಸರ ದಯದಿಂದ ಕವನ ಪೇಳಿ ದರಿದು । ದೋಷದೊಳಗೆ ದೀಪ ಹಚ್ಚಿ ದೊಪಾದೆಯಲ್ಲಿ ಭಾಸವಲ್ಲದೆ ಇದಕೆ ಕಾಣಬಾರದಧಿಕ । ರಾಶಿ ರತ್ನವ ಘಳಿಸಿ ಅವರು ಸುಖಿಸಿದರು । ಕಾಸು ಸಂಪಾದಿಸಿ ಹರುಷವಾಯಿತೆನಗೆ ಮೋಸ ಎನಗೆ ಯಿಲ್ಲ ವಿಜಯ ವಿಠಲರೇಯ ತಾ । ಸಲುವೆನೆಂದು ದಾಸರೊಳಗೆ ಕೂಡಿಸಿದಾ ॥5॥

ಜತೆ

ಆವಾವದೊ ಪುಣ್ಯ ಎನಗೊಂದು ತಿಳಿಯದು । ಭಾವಜಪಿತ ವಿಜಯ ವಿಠಲನು ಒಲಿದಾ ಕಾರುಣ್ಯದಲಿ ॥6॥



## ಸುಳಾದಿ 8

### ಧ್ರುವತಾಳ

ದಾಸರು ದಾಸರ ಸುತರು ನಾಲ್ವರು ಮುಂದೆ । ದೇಶ ಕಾಲವ ತಿಳಿದು ಲೇಶ ಸಂಶಯ ವಿಡದೆ । ದೇಶದೊಳಗೆ ತಮ್ಮ ದಾಸ ಪುಟ್ಟುವನೆಂದು । ಲೇಸಾಗಿ ದಯವನ್ನು ಸೂಸಿ ಕೇವಲವಾಗಿ । ಪೋಷಿಸಬೇಕೆಂದು ಏಸು ಪರಿಯಲ್ಲಿ । ಘಾಶೆಗೊಳಿಸುವಂಥ ದೋಷಗಳಟ್ಟಿ ಬರ । ಲೀಸದೆ ಪ್ರತಿದಿನ ವಾಸವಾಗಿ ಕಾಯ್ವರು ಸಾಸಿರ ಜನರು ಪಂಕ್ತಿಸಾಗಿ ಕುಳಿತಿರೆ । ರಾಶಿ ಶುಭ ಪದಾರ್ಥ ತಾ ಸವಿವಾಗ ಜನನಿ । ಆ ಶಿಶುವಿಗುತ್ತಮ ಗ್ರಾಸ ಉಳಿಸಿ ಉಣಿಸಿದೋಪಾದಿಲಿ । ಈ ಸುಲಭರು ಎನಗೆ ಶ್ರೀಶನ್ನ ಕಥಾಮೃತ । ದಾ ಶುಭ ಪದಾರ್ಥವಾ ಮೀಸಲು ಭಕ್ತಿಲಿ ಹಾ । ರೈಸಿ ಸವಿದದರ ಶೇಷ ಉಣಿಸಿ ಯಿಂದು । ಶಾಶ್ವಿತವಾಗಿರುವರು ಶೇಷಶಯನ ನಮ್ಮ ವಿಜಯ ವಿಠಲನನ್ನು ತು । ತಿಸುವಂತೆ ಮಾಡಿ ಕ್ಲೇಶವ ಬಿಡಿಸಿದರೊ ॥1॥

### ಮಟ್ಟತಾಳ

ಅಪ್ರಬುದ್ಧರೊಳಿಡದೆ ಕ್ಷಿಪ್ರದಲ್ಲಿ ಎನ್ನ । ವಿಪ್ರ ಗರ್ಭದಲ್ಲಿ ಅಪ್ರತಿಕೂಲರಾಗಿ । ಸುಪ್ರೇಮದಿ ತಂದು ಈ ಪೃಥ್ವಿಯೊಳಗೆ । ಸುಪ್ರವೀಣರು ಕಾಮಾಪ್ರಸರರೋಡಿಸಿ । ಅಪ್ರತಿದೈವದ ಕಥಾಪ್ರಸಂಗ ನಾನಾ ಪ್ರಕಾರದಲ್ಲಿ । ದ್ದು ಪ್ರವಾಹದಂತೆ ಸುಪ್ರಸಾಧನ ಕೀರ್ತಿ । ಅಪ್ರೀಯಾಗದಂತೆ ಸುಪ್ರಸಾದ ವಾತ । ತತ್ಪ್ರಮಾಣಿಕವು ಪ್ರೇರಿಸಿದರೊ । ಅಪ್ರಾಕೃತ ಲೀಲಾ ವಿಜಯ ವಿಠ್ಠಲನ ಪಾ ।ದ ಪ್ರಾರ್ಥನೆ ಮಾಡುವ ಪ್ರಭಾಸದಲ್ಲಿ ॥2॥

### ತ್ರಿವಿಡಿತಾಳ

ಭಕುತಂಗೆ ಬೆಂಬಲವಾಗಿ ಬಿಡದೆ ನಿತ್ಯ । ಸಕಲ ಕಾರ್ಯಂಗಳು ಮಾಡುವ ಅಲ್ಲಿಗೆ ಅಖಿಳ ಬಗೆಯಿಂದ ಸಹಾಯವಾಗಿ ಸಾ । ಧಕವ ಮಾಡಿಸುವರೊ ಮೋದದಿಂದ । ಶಕುತಿ ಯುಕುತಿ ವೀರಕುತಿ ಭುಕುತಿಮ್ಯಾಲೆ । ಭಕುತಿ ಮುಕುತಿ ಸರ್ವ ಉಕುತಿಯಲ್ಲಿಗೆ ಮನಾಕಕುಲಾತಿ ಮಾಡಲು ಅದೆ ವಹಿಸಿಕೊಂಡು । ಸಿಕರಾ ಬಪ್ಪುದೆ ಸಪ್ತಾಂಬುಧಿ ಮಾಡಿ ತೋರಿಸಿ । ಸುಖವ ಬಡಿಸಿದರೊ ಸರಳಾಗಿ ಕಲಕಾಲ । ದುಃಖಬಾರದಂತೆ ರಕ್ಷಿಸುತಿಪ್ಪರೋ । ರುಕುಮಿಣಿ ಪತಿ ನಮ್ಮ ವಿಜಯ ವಿಠಲ ನಂಘ್ರಿ । ನಖದಾಶ್ರಯದಲ್ಲಿ ನಿಲಿಸಿ ನಲಿದಾಡಿದರೊ ॥3॥

ಅಟ್ಟತಾಳ

ಎನ ಗೊಬ್ಬಗಲ್ಲ ಇವರು ಮಾಡಿದ ದಯ । ವನಿತೆ ತನುಜ ಮತ್ತೆ ಅನುಜರು ಕೇವಲ । ತನು ಸಂಬಂಧಿಗಳಿಗೆ ಮನಸಂಬಂಧಿಗಳಿಗೆ । ಮನೆ ಮನೆ ನೆರೆ ಹೊರೆಯಲ್ಲಿ ನೆನಪು ಮಾಡುವರಿಗೆ ಕನಸಿನೊಳಗೆ ಸ್ಮರಣೆಗೆ ಬಪ್ಪವರಿಗೆ ಅನುದಿನ ತಾವೆ ಟೊಂಕವನು ಕಟ್ಟಿನಿಂತು । ಎನ ಬೆನ್ನನೆಛಪ್ಪರಿಸಿ ಭಯವನು ಬಿಡುಯೆಂದು । ವನಜ ಭವಾದ್ಯರ ಅನುಸರಿಸಿಕೊಂಡು । ತನುವಿನ ಆಪತ್ತು ಜನರಪವಾದವ । ತೃಣ ಮಾಡಿ ಕಳೆದು ಶಾಂತನ ಮಾಳಿಪೆವೆಂದು । ಅನಿಮಿತ್ತರಾಗಿ ಪಾವನರು ನಿಂದ್ಯೆಧಾರೆ । ಎನಗ್ಯಾತರ ಚಿಂತೆ ವಿಜಯ ವಿಠಲನ್ನ । ನೆನಸುವ ಪ್ರೀಯರು ಅನುದಿನ ವೊಲಿದಿರೆ ॥4॥

ಆದಿತಾಳ

ಇವರನ್ನೆಲ್ಲ ಎನ್ನಾಧೀನದಲ್ಲಿಟ್ಟು । ಅವನಿಯೊಳಗೆ ಬದುಕಿ ಚಿರಕಾಲದಲ್ಲಿ ಹರಿಯ । ಶ್ರವಣ ಮನನ ಧ್ಯಾನ ಯೋಗವಂತರಾಗಿ । ಕವಿಗಳೆನಿಸಿ ಪರಿಪೂರ್ಣಾಯು ಸ್ಥಿರವಾಗಿ । ವಿವಾಹ ಮಹೋತ್ಸವ ನಾನಾ ಸಂಭ್ರಮಗಳು । ಎವೆಯಿಡುವನಿತರೊಳು ಸಾವಿರ ಮಾಡಿಸುತ್ತಾ । ಸವೆಯಾದ ಮನೋಭಿಷ್ಟಿಸವಿದುಂಡು ಸುಖಿಸೆಂದು । ಭವದೂರರು ಇನಿತು ಮಾಡಿಸುತಿಹರೊ । ಇವರು ನಾನು ಸಹ ಹರಿದಾಸರು ಕಾಣೊ । ಪವನ ನಿಂದಲಿ ನಮ್ಮ ದುರಿತ ಮೋಚನವೆಂದು । ಕವಿವಮ್ಮೆ ನುಡಿಯಲು ಲವಣಕರಗಿದಂತೆ ತವಕದಿಂದಲಿ ಪಾಪ ನಿವಹವು ಪೋಗೋವು । ಪವನಂತರ್ಗತನಾದ ವಿಜಯ ವಿಠಲನಿಗೆ । ಲವಲವಿಕೆಯುಳ್ಳನುಭವರು ಕೈ ವಿಡಿದರೊ ॥5॥

ಜತೆ

ಇನ್ನು ಕ್ಲೇಶದ ಭವ ಎಂಥಾದೊ ಎಂಥಾದೊ । ಚನ್ನ ವಿಜಯ ವಿಠಲನ ದಾಸ ಬಾಂಧವರು ॥6॥



## ಸುಳಾದಿ 9

## ರಾಗ ಭೈರವಿ ಧ್ರುವತಾಳ

ಗೋತ್ರ ಪ್ರವರೊಚ್ಚಾರಣೆ ಒಂದೆ ಕಾಣೊ । ಧಾತ್ರಿಯೊಳಗೆ ತಂದೆ ಮಕ್ಕಳು ಮಾಡುವ । ಕಾಲತ್ರಯ ಸಂಧ್ಯವೆಲ್ಲ ಎಂದಿಗೆ ಭೇದವಿಲ್ಲ । ಪುತ್ರನಿಗೆ ಪಿತನು ಅನಾರಂಭದಲ್ಲಿ ನಾಮ । ಮಾತ್ರವ ನುಡಿಸುವ ಬುದ್ಧಿ ಪೇಳಿ । ಚಿತ್ರವ ಗೋಡಿ ಮೇಲೆ ರಚಿಸಿರಲು ನೋಡಿ ಸ್ತೋತ್ರವ ಮಾಡಿದರೇನಹುದೊ ಚಿತ್ರಕೆ ಬಹು ವಿವೇಕವುಳ್ಳವನೆಂದು । ಪಾತ್ರರ ಮುಂದೆ ಕೊಂಡಾಡಿದಂತೆ । ಧಾತ್ರಿ ಯೊಳಗೆ ನಮ್ಮ ಪುರಂದರದಾಸರ । ಸ್ತೋತ್ರವ ಮಾಡಿರೈ ಸಚ್ಚೀಲರಾಗಿ । ಗಾತ್ರ ನಿರ್ಮಲವಕ್ಕು ಎಂದಿಗೆಂದಿಗೆ ದಿವ್ಯ । ನೇತ್ರದಿಂದಲಿ ಹರಿಯ ಸಂದರುಶನ । ರಾತ್ರಿ ಚರವೆಂದು ಪೆಸರುಳ್ಳವು ಕುಮುದ ಮಿ ತ್ರ । ಗೆ ಸಮವೇನೊ ಉಳಿದಾದವು । ಶ್ರೋತ್ರಾಭರಣವಾದ ದಾಸರ ಕವನ ಅ । ನ್ಯತ್ರರು ನುಡಿದದ್ದು ಧಿಕ್ಕರಿಪುದು । ನಿತ್ರಾಣನಾದ ಮನುಜ ಹಿರಿಯರ ವಿತ್ತದಿಂದ । ಯಾತ್ರೆಯ ಮಾಡಿ ಪುಣ್ಯ ಫಳಿಸಿದಂತೆ । ಸೂತ್ರಮೀಟಿ ಮೇಲು ಪಂಕ್ತಿ ಹಾಕಿ ಕೊಡಲು । ಮಾತ್ರೆಗಳನು ನೋಡಿ ಬರದಂತೆವೊ । ಶತ್ರು ಸಂಹಾರ ವಿಜಯ ವಿಠಲನಂಘ್ರಿ ಶತ । ಪತ್ರಬಲ್ಲವರಿಂದ ಇದೆ ವಿಸ್ತಾರ ನಿರ್ಮಾಣ ॥1॥

### ಮಟ್ಟತಾಳ

ಕಠಿಣವಾಗಿದ್ದ ಸಂಸಾರವೆಂದೆಂಬೊ । ಕೋಟಲೆ ಹೊಳೆಯನ್ನು ಹರುಷದಿಂದಲಿ ಜನರು । ದಾಟಿ ಪೋಗುವದಕ್ಕೆ ದಯದಲ್ಲಿ ಬಂದು । ನೀಟಾದ ಸೇತುವಿಯಾ ರಚಿಸಿದರು । ಅಂದು ಬೂಟಕತನ ಬಿಟ್ಟು ಸುಲಭ ಜ್ಞಾನದಲ್ಲಿ । ಹಾಟಕಾಂಬರಧಾರ ವಿಜಯ ವಿಠ್ಠಲರೇಯನ ನಾಟಿಕವ ಕೇಳೆ ನಾನಾ ಫಲವಕ್ಕು ॥2॥

### ತ್ರಿವಿಡಿತಾಳ

ಕಟ್ಟೆಯ ಕಟ್ಟಿದರು ಭವಸಾಗರಕೆ ಸ್ವಲ್ಪ । ಬಿಟ್ಟು ವೇಗದಿಂದ ಸಾಧ್ಯ ಮಾಡಿಕೊಂಡು । ಮೆಟ್ಟಿಕೆಯಿಂದಲಿ ದಾಟಿ ಪೋದರು ಜಗ । ಜಟ್ಟಿದಾಸರು ತಮಗೆ ಸುಲಭವಾದುದೆ ಎನಗೆ । ಇಟ್ಟು ಇದ್ದದೆ ಇಂದು ನೋಡಪೋದರೆ ಬಹು । ಗುಟ್ಟು ತೋರುತಲಿದೆ ಸಾಧಾರಣವಲ್ಲ । ಬಿಟ್ಟೆಯವರಿಗೆ ತಿಳಿಯಲಾಹದೆ । ಧಿಟ್ಟವಾದ ಕವನ ಎನ್ನಿಂದಾದುದಲ್ಲ । ಕೊಟ್ಟಿಗೆ ಮೇಲು ಉಪ್ಪರಿಗ್ಯಾಗುವದೆ । ಹುಟ್ಟಾರಭ್ಯವಾಗಿ ಮಂದನಾಗಿದ್ದ ವಗೆ ಮೆಟ್ಟು

ಇಲ್ಲದೆ ಬುದ್ಧಿ ಬರುವದೆಂತೊ । ದಟ್ಟಡಿ ಮಹಿಮ ಧರ್ಮಶೀಲ ವಿಜಯವಿಠಲರೇಯನ ಪಾದ ಕಮಲ ಮನ । ಮುಟ್ಟಿ ಭಜಿಸುವ ದಾಸರ ಕರುಣಾವೆನ್ನು ॥3॥

ಅಟ್ಟತಾಳ

ಎಲ್ಲೆ ಉಪದೇಶವ ಎಲ್ಲಿ ದಾಸರ ದಯ । ಎಲ್ಲಿ ಅವರ ಕಾಂಬುವದು ಮತ್ತಾವಲ್ಲಿ । ಎಲ್ಲೆ ವರ್ತಮಾನ ಅವರೆಲ್ಲಿ ನೀನೆಲ್ಲಿ । ಎಲ್ಲಿ ಕಾಲದವರು ಎಲ್ಲಿ ಈ ದಿವಸವು । ಎಲ್ಲಿಯ ಮತಿಯೆಂದು ಪೋಗಲಾಡದಿರಿ । ಬಲ್ಲವರಿಗೆ ಇದು ಯಥಾರ್ಥವೆನಿಪದು ॥ ಸೊಲ್ಲು ಪೇಳುವೆ ಕೇಳಿ ಸಜ್ಜನರು ದಿನಂಪ್ರತಿ । ಯಲ್ಲಿ ಕಾಶಿಗೆ ಸರ್ವ ದೇವಾದಿಗಳು ಬಂದು । ನಿಲ್ಲದೆ ಮಣಿಕರ್ಣಿಕೆಯಲ್ಲಿ ಸ್ನಾನವ ಮಾಡಿ । ಎಲ್ಲ ಸತ್ಪುಣ್ಯ ಪುರುಷರು ಸಂಚರಿಪರು ಅಲ್ಲಿಗೆ ಪೋದಾಗ ಎನ್ನ ಗುರುಗಳ ಕರುಣಾ । ವಲ್ಲಡಿಗೆ ಸ್ತುತಿಸಿ ಪೇಳಲಳವೆ । ಬಲ್ಲಿದರೊಡೆಯ ಶ್ರೀ ವಿಜಯ ವಿಠಲನಂಘ್ರಿ । ಪಲ್ಲವ ಪೂಜಿಸುವ ಭಾಗ್ಯವೆ ದೊರಕಿತು॥4॥

ಆದಿತಾಳ

ಅಂಕಿತ ಒಂದೆ ಬ್ಯಾರೆ ವಿಜಯ ನಾಮವಲ್ಲದೆ। ಶಂಕಿಸದಿರಿ ಜನರು ಮಿಗಿಲಾದದ್ದೆಲ್ಲ ಸಮ । ಕೊಂಕುಗಳೊಂದಿಲ್ಲ ದಾಸರು ನುಡಿಸಿದಂತೆ ಅಂಕುರವಾಗುತಿದೆ ಎನ್ನಿಂದ ಮಾಳ್ಪಕೃತಿ । ಟಂಕಸಾಲೆಯೊಳು ಮುದ್ರೆಗಾರನು ತನ್ನ । ಕಿಂಕರನ್ನ ಕರೆದು ಹಣಹೊನ್ನಿಗೆ ನೀನೆ । ಡೊಂಕಾಗದಂತೆ ಮುದ್ರೆ ಹಾಕೆಂದ ತೆರವಯ್ಯ । ಮಂಕು ಮಾನವ ನಾನು ಅವರಾಜ್ಞದವನಾಗಿ । ಶಂಕೆಯಿಲ್ಲದೆ ಬಹು ಕೀರ್ತನೆ ಪೇಳುವೆ । ಪಂಕಜ ಪತಿ ನಮ್ಮ ವಿಜಯ ವಿಠಲರೇಯ । ಸೋಂಕಿದಾಕ್ಷಣವೆ ಸರ್ವಾಭೀಷ್ಟೆ ಯಾಗುವುದು ॥5॥

ಜತೆ

ಉಭಯ ಜನಕೆ ವಿಜಯ ಕೊಡುವವನು ತಡೆಯದೆ । ವಿಭುವೆ ವಿಜಯ ವಿಠಲ ತನ್ನವರಿಗೆ ಪ್ರಾಣ ॥6॥



## ಸುಳಾದಿ 10

### ರಾಗ ಧ್ರುವ

ದಾಸರ ಮಹಿಮೆಗೆ ಅನಂತ ನಮೊ ನಮೊ ದೇಶದೊಳಗೆಲ್ಲಿ ಸರಿಗಾಣೆನೋ। ವಾಸುದೇವನ ಪಾದ ಹೃದಯ ಮಧ್ಯದಲ್ಲಿಟ್ಟು। ಲೇಸಾಗಿ ಪೂಜಿಪರು ಭಕುತಿಯಲ್ಲೀ। ಲೇಶವಾದರು ಕಾಮ ಕ್ರೋಧಾದಿಗಳೆಯಿಲ್ಲ। ಸಾಸಿರ ಜನ್ಮವೆತ್ತಿ ಬಂದ ಕಾಲಕ್ಕೂ ನಾನು। ಈ ಸುಲಭ ಗುರುಗಳಿಗೆ ಆವಲ್ಲಿ ಸರಿಗಾಣೆ। ಏಸು ಬಗೆಯಿಂದ ಕರುಣವ ಮಾಡುವರು। ಈ ಶರೀರವೆ ಅವರ ಸದನದಲ್ಲಿ ಇಪ್ಪ। ದಾಸನು ದಾಸರ ಯುಗಳ ಪಾದಕ್ಕೆ ನೀವಾಳೀಸಿ। ಬಿಸುಟುವೆನು ಅನಂತ ಜನುಮದಲ್ಲಿ। ಈ ಸುಖ ತಪ್ಪದೆ ಎನಗಾಗಲಿ ಬಿಡದೆ। ಕೇಶವ ವಿಜಯ ವಿಠಲನ ದಯದಿಂದ। ದಾಸ ಪುರಂದರ ಗುರುಗಳ ಒಲುಮೆ ॥1॥

### ಮಟ್ಟತಾಳ

ಕೇವಲ ದೃಢವಾಗಿ ಶ್ರೀ ವಲ್ಲಭನಾ ರಾ। ಜೀವ ಪಾದವನ್ನು ಭಾವದಲ್ಲಿ ನಿಲಿಸಿ। ಪಾವನ ವಾಗಿಪ್ಪ ಪಾವಮಾನಿ ಮತದ। ಕೋವಿದರನು ಸರಿಸಿ ದೇವ ವಿಜಯ ವಿಠಲ ಒಡಿಯನ ಸರ್ವ। ಜೀವರಿಗೆ ಭಿನ್ನ ದೇವರೆ ಜಗಕೆಂದು ॥2॥

### ತ್ರಿಪುಡಿತಾಳ

ಈ ಪರಿಯಲ್ಲಿ ವಿಜಯ ನಗರದಲ್ಲಿ ಇದ್ದು। ತಾಪಸಿಗರ ಗುರುವು ಗುರು ವ್ಯಾಸರಾಯ ಮು। ನಿ ಪನ್ನ ಮನ ಮೆಚ್ಚುವಂತೆ ಸೋಜಿಗ ತೋರಿ। ಭೂಪಾಲಕರ ಮಿಗಲಾದವರ ತೃಣವೆಂ। ದಾಪತಿ ಕರಿಸದೆ ತುಚ್ಛೆಯ ಮಾಡಿ। ಅಪಾರ ಮಹಿಮೆಯ ತೋರುವ ಶ್ರೀ ಹರಿಯ। ರೂಪವೆ ಮನದೊಳಗಿಟ್ಟು ನಲಿವ। ಗೋಪಾಲ ವಿಜಯ ವಿಠಲನ ದಾಸರೊಳು। ಈ ಪುರಂದರದಾಸರಿಗೆ ಸಮವುಂಟೆ ॥3॥

### ಅಟ್ಟತಾಳ

ಇವರಾಡಿದ ಭೂಮಿ ಎನಗದು ವೈಕುಂಠ। ಇವರಿದ್ದ ಸ್ಥಾನವು ಎನಗೆ ಶ್ವೇತ ದ್ವೀಪ। ಇವರಿದ್ದದೆ ಎನಗಾನಂತಾಸನ ಕಾಣೊ। ಇವರಿದ್ದವನಿ ಎನಗೆ ತ್ರೈಲೋಕ್ಯವೊ। ಇವರು ಮಾಡಿದ ಲೀಲೆ ಎನಗೆ ವೇದೋಯುಕ್ತಿ। ಇವರ ಚರಿತೆಯಲ್ಲ ಎನಗದು

ಪುರಾಣ । ಇವರ ಪಾದಾಂಗುಟದಲ್ಲಿ ಸರ್ವ ತೀರ್ಥ । ಇವರ ಪಾದಾಂಗುಟದಲ್ಲಿ ಸರ್ವ ಕ್ಷೇತ್ರ । ಇವರ ಪಾದರೇಣು ಎನಗೊಜ್ರ ಪಂಜರ । ಇವರಿಂದಲಿ ದೇಹ ಉದ್ಧಾರ ವಾಗೋದು । ಇವರ ಪಾದ ಹೆಜ್ಜೆ ಬಿದ್ದಲ್ಲಿ ಈ ಕಾ । ಯವನು ಮಾಡಿ ಹೊರಳಿಸಿ ತಗುವೆನೊ । ಅವನೀಶಾ ವಿಜಯ ವಿಠಲನ್ನ ನಂಬಿದ । ಹವಣರ ಪೊಳವ ಪಾದವನು ಸೇರುವೆನು ॥4॥

ಆದಿತಾಳ

ತಂದೆ ತಾಯಿಗಳೇ ದಾಸರು । ಬಂಧು ಬಳಗವೆ ದಾಸರು । ಹಿಂದೆ ಮುಂದೆ ಕಟ್ಟುಕ್ಕಾವಲಿ । ಯಿಂದ ಸಾಕುವರೆ ದಾಸರು । ಅಂದು ಇಂದು ಬಿಡದಲೆ ಬಂದ ಬಂಧಾನಗಳೆಲ್ಲ । ಪೊಂದದಂತೆ ಮಾಡಿ ಪುಣ್ಯ ತಂದು ಕೊಡುವರೆ ದಾಸರು । ಸಂದಿದೇನು ಸಂದಿದೇನು ಎನ್ನ ಕುಲ ಸಹಿತ ಪು । ರಂದರದಾಸರ ಪಾದ ದ್ವಂದ್ವದಲ್ಲಿಗೆ ಪೋಗಿ । ಮಂದರಾದ್ರಿ ಧರ ನಮ್ಮ ವಿಜಯ ವಿಠಲ ಹರಿಯ । ಮಂದಿರಕೆ ಸೋಪಾನ ಸಂದೇಹ ತೊಲಗಿತು ॥5॥

ಜತೆ

ದಾಸರೆ ಮನ ದೈವಾ । ದಾಸರೆ ಮನೆ ದೈವ । ದಾಸರಲ್ಲದೆ ಯಿಲ್ಲ ವಿಜಯ ವಿಠ್ಠಲ ಬಲ್ಲ ॥6॥



## ಸುಳಾದಿ 11

ರಾಗ ಭೈರವಿ ಧ್ರುವತಾಳ

ದಾಸರ ಕರುಣವೆ ಎನಗೆ ಸ್ನಾನ ಸಂಧ್ಯಾ । ದಾಸರ ಕರುಣವೆ ಎನಗೆ ಜಪ ತಪವು । ದಾಸರ ಕರುಣವೆ ಎನಗೆ ಉತ್ತುಮ ಜ್ಞಾನ । ದಾಸರ ಕರುಣವೆ ಎನಗೆ ಮೌನ ಧ್ಯಾನ । ದಾಸರ ಕರುಣವೆ ಸರ್ವ ಯುಕ್ತಿ । ದಾಸರ ಕರುಣವೆ ಎನಗೆ ಸರ್ವಶಕ್ತಿ । ದಾಸರ ಕರುಣದಿಂದ ಘಾಸಿಯಾಗದೆ ಮನ ।ಮೀಸಲ ಮನದಲಿ ಎಸೇಸು ದಿವಸಕ್ಕೆ । ತ್ರಾಸು ತೂಗಿದಂತೆ ಲೇಸು ಸಮನೆನಿಸಿತು । ಶಾಶ್ವಿತ ಸ್ಥಿರನಾಮಾ ವಿಜಯ ವಿಠ್ಠಲ ನಿನ್ನ ಆಸರ ವಿಡಿದ ನಿಜ ದಾಸರೊಳು ನೆರದೆ ॥1॥

ಮಟ್ಟತಾಳ

ವೇದಶಾಸ್ತ್ರ ತರ್ಕ ಓದಿಕೊಂಡವನಲ್ಲ । ವೇದಾರ್ಥವ ಜ್ಞಾನ ನಿದರಶನವಿಲ್ಲ । ಸಾಧು ಸಜ್ಜನರಿಂದ ಬೋಧೆಯಾದವನಲ್ಲ । ನಾದಬಿಂದು ಮೊದಲಾದವೆ ಒಂದಿಲ್ಲ । ಆಧಾರ ನಿಲಯ ವಿಜಯ ವಿಠಲನ್ನ ಪಾದವೆ ನೆರೆನಂಬಿ ಕ್ರೋಧ ರಹಿತನಾದೆ ॥2॥

ತ್ರಿವಿಡಿತಾಳ

ಲಕ್ಷಣ ಛಂದಸ್ಸು ಆದಿ ಅಂತ್ಯ ಪ್ರಾಸು ಅಕ್ಷರ ವಡಿಗಣ ಯಮಕ ನಾನಾ ವಚನ । ದೀಕ್ಷಿತನಾಗಿ ಪೇಳುವ ವಿಧಿನಿಷೇಧ ಲಕ್ಷಕ್ಕೊಂದಾದರು ನೋಡ ಸಲ್ಲ । ಕ್ಷಿತಿಯೊಳಗುಳ್ಳ ನಿಜ ಭಾಗವತರು , ಉ । ಪೇಕ್ಷವ ಮಾಡದಲೇ ಲಾಲಿಸಿ ತಿಳಿವದು । ಕಕ್ಷಿ ನಿಮಗಿಲ್ಲ ಕರವ ಮುಗುವೆ ಪರ । ಪಕ್ಷ ಎಣಿಸದಲೆ, ಮನದಲ್ಲಿ ಮನ್ನಿಪದು । ನಕ್ಷತ್ರ ನೇಮಿ ಸಿರಿ ವಿಜಯ ವಿಠಲನ್ನ । ಸಾಕ್ಷಾತ್ಕರಿಸಿಕೊಂಡ ದಾಸರೆ ಗುರುಗಳು ॥3॥

ಅಟ್ಟತಾಳ

ನೇತ್ರ ಉಳ್ಳವನಿಗೆ ಕಾಷ್ಟದ ಪರವೇನು । ನೇತ್ರ ಹೀನನು ಕಾಷ್ಟವ ನರಸುವನು। ಕ್ಷೇತ್ರದಂತೆ ಗುರು ಸರ್ವಸ್ಸು ಪ್ರಧಾನ । ಗಾತ್ರದ ಮ್ಯಾಲೆ ಪೂರ್ಣ ದಯವಿರಲಿಕ್ಕೆ । ಘಾತ್ರ ಲಘು ಪ್ರಮಾಣಾದಿಗಳು ನೋಡಿ । ಸೂತ್ರವ ರಚಿಸಿ ಕಲಾಪ ಬೀಳುವದ್ಯಾಕೆ । ಶತ್ರುಜಿತ ನಾಮ ವಿಜಯ ವಿಠಲರೇಯ । ಧಾತ್ರಿಯೊಳಗೆ ಸರ್ವತ್ರರ ಕರುಣೇ ॥4॥

### ಆದಿತಾಳ

ಇಕ್ಷುದಂಡ ಅದಂತ ಪರೀಕ್ಷಿಸಿ ಮೆಲಿಯ ಬಲ್ಲನೆ। ಅಕ್ಷಿಗತನು ಶುದ್ಧ ವಸ್ತು ನೀಕ್ಷಿಸಿ ಪೇಳಬಲ್ಲನೆ । ಈ ಕ್ಷಿತಿಯೊಳಗೆ ಜ್ಞಾನ ಚಕ್ಷುನಿಂದ ಹರಿಯ ಪಾದ । ಪೇಕ್ಷೆಮಾಡಿ ಬದುಕುವಂಥ ಮೋಕ್ಷಕೆ ಸಾಧನ ಪುರುಷ । ಸೂಕ್ಷ್ಮದಿಂದಲಿ ತಿಳಿದು ತೀಕ್ಷ್ಣದಲ್ಲೊಡಂಬಡುವ। ನಕ್ಷತ್ರ ನಾಮದೇವ ವಿಜಯ ವಿಠಲ ಬಂಧು। ರಕ್ಷಿಸುವನು ತನ್ನ ದಾಸರ ಮನ್ನಿಸಿದವನ ॥5॥

### ಜತೆ

ಸುರಗಿ ಕಡುವದಲ್ಲ ಎನ್ನ ಸ್ವಾತಂತ್ರವಲ್ಲ। ಗುರುವೆ ಬಲ್ಲ ಕ್ಷಮ ವಿಜಯ ವಿಠಲನೆ ಪ್ರೇರಕ ॥6॥



## ಸುಳಾದಿ 12

ರಾಗ ನಾಟಿ ಧ್ರುವತಾಳ

ಗುರುಗಳೆಂದರೆ ಇವರೆ ಗುರುಗಳು ಎನಗೆ ಕಾಣೊ। ಧರೆಯೋಳು ಪುರಂದರದಾಸರೆ ಗುರುಗಳು । ಮರಳೆ ಮತ್ತೊಬ್ಬರುಂಟೆ ಕರುಣಿಸಿ ನೆನೆದಂತೆ । ವರಗಳ ಇತ್ತು ನಿತ್ಯ ಪರಿಪಾಲಿಸುವ ಹರಿ । ಮರುತನ್ನ ಲೀಲೆಗಳು ಹಿರಿದಾಗಿ ತಿಳುಪಿ ವಿ । ಸ್ತರವಾಗಿ ಎನ್ನಿಂದ ಬರಿಸಿದರು ಹರಿಚರಿತೆ । ದುರಿತ ಸಂದಣೆಯಲ್ಲಿ ಶರೆ ಬಿದ್ದು ತಪಿಸುತಲಿರೆ ನೋಡಿ ಲಾಲಿಸಿದರು ತಮ್ಮ ಕರುಣಾದಿಂದಾ । ಹರಿಯ ಎಳೆಮರಿ ತಾರುಕ್ಷನಾ ವದನದೊಳು । ಇರಲು ಶಳೆದು ಕಡೆಗಿ ತೆಗದಂತೆ ಇಂದಿಗಾ । ಗುರು ಶಿರೋಮಣಿ ಎನ್ನ ದುರಿತಾದಿಂದ ಶಳೆದು ಪರಮಾರ್ಥದ ಮಾರ್ಗ ಆರಪು ಮಾಡಿ । ಕರುಣಾ ಸಾಗರ ನಮ್ಮ ವಿಜಯ ವಿಠಲನ್ನ। ಸ್ಮರಿಸುವುದಕೆ ಜ್ಞಾನವನ್ನೆ ತೋರಿದರು ॥1॥

### ಮಟ್ಟತಾಳ

ಆಡವಿಗೆ ಬಿದ್ದವನಾ ದಾರಿಗೆ ತಂದಂತೆ। ಒಡಲಿಗಿಲ್ಲದವನಾ ಸುಧಿಯೊಳಗಿಟ್ಟಂತೆ । ಕೊಡೆಯಿಲ್ಲದವಗೆ ಸುರತರು ವಲಿದಂತೆ। ನಡಿಯ ಲರಿಯದವಗೆ ನಡೆಯ ಕಲಿಸಿದಂತೆ । ನುಡಿಯ ಲರಿಯದವಗೆ ನಿಗಮ ತಿಳಿಸಿದಂತೆ । ಮಡುವಿನೊಳು ಬಿದ್ದವಗೆ ನಾವಿ ದೊರಕಿದಂತೆ। ಪೊಡವಿ ಎಡೆಯವಗೆ ಹರಿವಾಣ ದೊರಕಿದಂತೆ। ಮುಡಿಯ ಪೊತ್ತು ಪೋಪಗೆ ಊಟವು ಸಿಕ್ಕಿದಂತೆ। ಕಡು ರೋಗದವಗೆ ಸಂಜೀವನದಂತೆ। ಜಡಮತಿ ನಾನಾಗಿ ಪೊಡವಿಯೊಳಗೆ ಭವದ । ಒಡನೊಡನೆ ನಿತ್ಯ ಎಡಬಿಡದೆ ಇರಲು । ಕೆಡಿಸುವ ಕಳ್ಳರ ನಡುವೆ ನುಡಿಯ। ತೊಡಕಿ ಸರ್ರನೆ ಕೈ ಪಿಡಿದು ಪಾಲಿಸುವಂತೆ। ಮೃಢ ಬಾಂಧವ ನಾದ ವಿಜಯ ವಿಠಲರೇಯನ। ಅಡಿಗಳ ನಾಮವ ನುಡಿಸಿದರು ಒಲಿದು॥2॥

### ತ್ರಿವಿಡಿತಾಳ

ಏನು ಕರುಣೆಗಳೊ ಎಮ್ಮ ಗುರುಗಳು। ಏನು ಸ್ವಾಭಾವಿತಾನಂದವು ತಿಳಿಯದು । ಮಾನವ ಯೋನಿಯಲ್ಲಿ ಬಂದು ಬಾಳುವ ಎನ್ನ। ಮೀನ ಉದಕದೊಳು ಇದ್ದಂತೆ ಮಾಳ್ಪರು। ಆನವರಿಗೆ ಲೇಶಾ ಅಧಿಕರ ಕಾಣೆನೋ। ಅನಂತ ಜನ್ಮವನು ಧರಿಸಲೂ । ಈ ನಾಡಿನೊಳು ಎನಗೆ ಪ್ರಾಣಕೆ ಬಲು ಪರಿ ॥ ಏನೇನು ದುರಿತಗಳು ಬಂದಟ್ಟಾಲು । ಮಾಣಾಗಳದು ಎನ್ನ ಮಾನಸ ದರ್ಪಣ ವಾನು ಇತ್ತರು ಮುದದಿಂದ ಕರುಣಿಸಿ ।

ಶ್ವಾನ ಛಳಿಯೊಳಿರೆ ವಜ್ರ ಕವಚವನ್ನು ಮೇಣು ದೊರೆತದ್ದು ನೋಡು ಎನ್ನ ಭಾಗ್ಯ । ನಾನಾರಿಗಂಜೆನೊ ವಿಜಯವಿಠಲರೇಯನ । ಧ್ಯಾನವ ಮಾಳ್ಪಂಥ ಜ್ಞಾನಿಗಳನು ಕಂಡೆ॥3॥

ಅಟ್ಟತಾಳ

ಗಾನಾ ಮಾಡಿದರೇನು ಧ್ಯಾನಾ ಮಾಡಿದರೇನು । ಕಾನನದೊಳು ಪೋಗಿ ತಪವೆ ಸೇರಲೇನು । ಮಾನವನು ಪವಮಾನ ಮತವನಂಬಿ । ಜ್ಞಾನ ಉಪದೇಶ ವಾಗದಲೇ । ತಾನು ಏಸು ಕಾಲ ಬದುಕಿದ ಫಲವೇನು ಬಾಣಾ ಇಲ್ಲದ ಬಿಲ್ಲಿನಂತೆ ಕಾಣೊ । ಮಾನವಂತರಾದ ಗುರುಗಳ ಉಪದೇಶ । ವಾನು ಪಡೆದರೆ ಸ್ನಾನಾದಿಯಾ ವ್ಯಾಪಾರವೇನು । ವಾಣಿ ಪತಿಯ ಜನಕ ವಿಜಯ ವಿಠಲರೇಯ । ತಾನಾಗಿ ಒಲಿವ ಗುರುಭಕ್ತಿ ಉಳ್ಳವಂಗೆ ॥4॥

ಆದಿತಾಳ

ಏಸು ಬಲ ಇದ್ದರೇನು ತನ್ನ ಗುರುಗಳ ಬಲ । ಲೇಸಾಗಿ ಇಲ್ಲದಿರೆ ಒಂದು ಫಲ ನೀಯವೊ । ದೇಶದೊಳುಳ್ಳವರ ಲೇಸು ತಪ್ಪಿದರೇನು । ದೋಷ ವರ್ಜಿತರಾದ ಗುರುಗಳ ದಯವಿರೆ । ಮೋಸ ವೆಂಬೊದೆಂದಿಗಿಲ್ಲ ದಿನಪ್ರತಿ ದಿನ ಬಿಡದೆ । ಈಶಾನುಗ್ರಹ ಉಂಟು ಸಿದ್ಧಾರ್ಥ । ಎನ್ನಿರೊ ಕಾಶಿ ಮೊದಲಾದ ಸರ್ವಯಾತ್ರಿ ತೀರಿತ ಮಿಂದು । ರಾಶಿ ಹಣ ಕೂಡಿಸಿ ದಾನ ವಿತ್ತರಾನೆಕಾ । ಸಮಾನವಲ್ಲ ಸುಲಭಾ ಗುರುಗಳ । ಸ್ಮರಣೆಗೆ ಸರಿವುಂಟೆ ಕ್ಲೇಶ ಬಡದೆ ನಿತ್ಯ ಶುದ್ಧ ಮನದಿ ನಂಬಿರೊ । ದಾಸರ ಪ್ರೀಯ ನಮ್ಮ ವಿಜಯ ವಿಠಲರೇಯ । ಲೇಸು ತೋರಿಸುವ ಬಿಡದೆ ಯಿನಿತು ನಡೆದವಗೆ ॥5॥

ಜತೆ

ಗುರು ಪುರಂದರದಾಸರ ನೆರೆ ನಂಬಲು । ನಿರುತ ಕಲತು ವಿಜಯ ವಿಠಲ ಒಲಿದ ॥6॥



## ಸುಳಾದಿ 13

### ರಾಗ ಭೈರವಿ ಧ್ರುವತಾಳ

ದಾಸರಾ ಹೃತ್ಕುಮುದ ಚಂದ್ರ ಗುಣಸಾಂದ್ರ । ವಾಸವಾಗಿರು ಎನ್ನ ಹೃದಯದೊಳಗೆನ್ನಾ। ದಾಸರ ದಯದಿಂದ ಭೂಸುರ ಗರ್ಭದಲಿ। ಈ ಶರೀರವು ಬಂದು ಲೇಸು ಕೃತಾರ್ಥನಾದೆ। ಏಸೇಸು ಜನ್ಮದ ದೋಷ ರಾಶಿಗಳು ನಿ। ರಾಶೆಯಲಿ ನಿಂದು ಪರದೇಶಿಗಳಾದವು। ಮೀಸಲದ ಪುಣ್ಯವಾರಾಶಿಗೆ ತುಂಬಿ। ಸೂಸುವಂತೆ ಸುತ್ತ ಭೂಷಣವಾಗಿದೆ ನೋಡು । ದಾಸರ ಚೂಡಾಮಣಿ ದಾಸರ ಶಿರೋರತನ ।ದಾಸರಾಗ್ರಣಿಯೇ ಕರುಣಿಸಲು ಪಾಲಿಸಿತು। ಸಾಸಿರಾಂಶ ನಾಮ ವಿಜಯ ವಿಠ್ಠಲನ್ನ ದಾಸರೊಳು ಕೂಡಿ ವಿಶೇಷದವನಾದೆ ॥1॥

### ಮಟ್ಟತಾಳ

ಗೆದ್ದೆನೊ ಗೆದ್ದೆನೊ ಜನನಾದಿಯ ಭೀತಿ। ಎದ್ದೆನೊ ಎದ್ದೆನೊ ಭವಗಡಲಿಂದ । ಇದ್ದಿನೊ ಇದ್ದಿನೊ ಇದ್ದಿನೊ ಉತ್ತಮರ ಬಳಿಯ। ಮೆದ್ದೆನೊ ಮೆದ್ದೆನೊ ಹರಿ ನಾಮವನು । ಒದ್ದೆನೊ ಒದ್ದಿನೊ ಸಂಚಿತ ಪಾಪಗಳು । ಬಿದ್ದೆನೊ ಬಿದ್ದೆನೊ ಶ್ರೀಪತಿಯಪಾದಕ್ಕೆ। ಸಿದ್ಧನಾಮಕ ದೇವ ವಿಜಯ ವಿಠ್ಠಲರೇಯ। ಮದ್ಗುರು ತದ್ಗುರು ಪಾದವ ಪೀಡಿಸಿದನೊ ॥2॥

### ತ್ರಿವಿಡಿತಾಳ

ಕಪಿ ಕುಲೋತ್ತಮನ ಮತ ಜಪಿಸಿ ಪೊಕ್ಕದರಿಂದ । ಕಪಟ ಮತಿಗಳೆಲ್ಲ ನಿಪತನವಾದವು। ತಪುತ ಮುದ್ರಿಗಳಿಂದ ತಪಿಸಿತು ದುರಿತೌಘ। ಉಪದೇಶದಿಂದಲಿ ಉಪಶಮನವಾಯಿತು ಸ್ವಪನದಲ್ಲಿ ಪಾಪ ದುಪಹತಿ ಕಾಣೆನೊ। ವಿಪರೀತವೆಲ್ಲ ಬಲು ಸುಪರೀತವಾಯಿತು। ಸುಪಥ ತೋರಿದ ಮಹ। ತಪ ವಿಜಯ ವಿಠಲ ಕೃಪೆ ಮಾಡಿದನು ಒಲಿದು ಕೃಪಣ ವತ್ಸಲ ರಂಗ ॥3॥

### ಅಟ್ಟತಾಳ

ನೆಲೆಯಿಲ್ಲದ ಕರ್ಮ ಜಲಧಿಯೊಳಗೆ ಮುಳುಗಿ ನೆಲೆಗಾಣದಲೇವೆ ನೆಲೆಹತ್ತಿ ಪೋಗಿರೆ। ನೆಲವು ಹರಿದು ಕೆಳಗೆ ಬೀಳಲಮೃತವು। ನೆಲದ ಪಾಲಾದಂತೆ ಫಲಗಳು

ಪೋಗಲು । ನೆಲೆಯ ಬಲ್ಲವರಿಲ್ಲ ನೆಲನ ತಂದವನೆಮು । ನ್ನೆಲ್ಲವೆಂದು ಕೂಗಲು ಒಳಗಿದ್ದವರೊದರೆ । ನೆಲೆಬಲ್ಲ ಜಾಣನು ನಲಿವುತ್ತ ವೇಗದಿ । ನೆಲೆಹತ್ತ ಗೊಡದಂತೆ ನಿಲಿಸಿದನು ತಡಿಗೆ । ನೆಲೆಗೊಳಸಿದನು ಎನ್ನಳಿಲಿಕೆ ಪರಿಹರಿಸಿ । ನೆಲಪತ್ತಿ ಸರ್ವಾಂಗವಿಜಯ ವಿಠಲನ್ನ । ನೆಲೆಬಲ್ಲ ದಾಸರ ನೆಳಲು ನೆಲೆಯಾಗೆ ॥4॥

ಆದಿತಾಳ

ಆರಿಗಂಜೆನು ಇನ್ನು ಕ್ರೂರ ರುಪಟಳವಾದರೂ । ತೂರಿ ಬಿಡುವೆನು ಜೊಳ್ಳು । ಸುಂಟರ ಘಾಳಿಗೆ ಪೋದಂತೆ ಸೇರಗೊಡೆನು ಯಮದೂತರ । ಸೂರೆಗೊಂಬೆ ಮೇಲು ಲೋಕ । ಈ ರೀತಿಯಲ್ಲಿ ಇದ್ದು ಆರೈದು ಜನ್ಮಕ್ಕಾದರೂ । ಶಾರಂಗಧರ ನಾಮಾ ವಿಜಯ ವಿಠಲನ ದಾ । ಸರ ಕರುಣದಿಂದ ಮೆಲ್ಲನೆ ಆರಾಧಿಸುತ್ತ ಹರಿಪಾದ ॥5॥

ಜತೆ

ಸಂಶಯ ಪೋಯಿತು ಇಂದು ಗುರುಗಳ ದಯದಿಂದ । ಪ್ರಾಂಶುವೆ ವಿಜಯ ವಿಠಲನು ಬಲವಾದ ॥6॥

★★★

## ಸುಳಾದಿ 14

### ತಾಳ ಧ್ರುವ

ದಾಸರ ನಿಜ ಕಾರುಣ್ಯ ಪಾತ್ರನು ನಾನು। ದಾಸರ ಹೆಬ್ಬಾಗಿಲ ಮುಂದೆ ಕಾಯುವ ನಾನು। ದಾಸರ ಮನೆಯಲ್ಲಿ ಅಂಗಳ ತೊಳೆವವ ನಾನು। ದಾಸರ ಭೋಜನ ಶಾಲೆ ಸಮ್ಮಾರ್ಜನಗೈವ ನಾನು। ದಾಸರ ಸದನಕ್ಕೆ ಜಲವಾಹಕ ನಾನು। ದಾಸರ ಪೂಜಾ ಸಾಧನ ದ್ರವ್ಯ ತರುವವ ನಾನು। ದಾಸರ ಊಟದೆಡೆ ಎಂಜಲು ತೆಗೆವವ ನಾನು। ದಾಸರ ಬಳಿಯಲ್ಲಿ ಸಮ್ಮೊಗದವ ನಾನು। ದಾಸರುಂಡದ್ದೆ ಉಂಡು ದಾಸರುಟ್ಟದ್ದೆ ಉಟ್ಟು। ದಾಸರಾಡಿದ್ದೆ ಎನಗೆ ವೇದ ವಾಕ್ಯವೆಂದು। ಲೇಸಾಗಿ ಪೇಳಿ ಕೊಳುತಲಿದ್ದವರ ಸಂಗ। ಲೇಶ ಬಿಡದೆ ಕಾಲ ಕಳೆದ ಜ್ಞಾನಿಗಳಿವರ। ದಾಸ ದಾಸೀ ಜನರ ಎಲ್ಲೆಲ್ಲಿಗೆ ನಿಜ। ದಾಸ ದಾಸನು ನಾನು ಅನಂತ ಜನುಮದಲ್ಲಿ। ಭೂಷಣ ಎನಗಿದೆ ಮತ್ತಾವ ಸಂಪತ್ತು। ಸೂಸಿ ಪ್ರಾಪುತವಾಗಲದರಿಂದ ಲಾಭವೇನು। ದಾಸ ಜನರ ಪ್ರೀಯ ವಿಜಯ ವಿಠಲರೇಯನ। ದಾಸನಾದವನಿಗೆ ಆವದು ಕೊರತೆಕಾಣೆ ॥1॥

### ಮಟ್ಟತಾಳ

ಸುಣ್ಣಕ್ಕೆ ಗತಿಯಿಲ್ಲದ ಮನುಜ ಪಾಮರಗೆ। ಮುನ್ನೆ ಕುಳಿತಲ್ಲಿ ರನ್ನದೊಪ್ರದಖಣೆ। ತನ್ನಿಂದಲೆ ತಾನೆ ಕಣ್ಣಿಗೆ ಪೊಳೆದಂತೆ ಚೆನ್ನಾಗಿ ಬಳಿಯಲ್ಲಿ ಬಣ್ಣಿಸಲರಿದು। ಘನ್ನ ದುರಿತ ಮೋಚನ್ನ ವಾದುದಕೆ। ಎನ್ನ ಪುಣ್ಯವಲ್ಲ ಎನ್ನ ಸಾಧನವಲ್ಲ। ಮನ್ನಿಸಿ ಪಿರಿಯರು ಇನಿತು ಪಾಲಿಸಲು। ಇನ್ನು ವೆಗ್ಗಳವಿದೆ ಜನಾರ್ದನದೇವ ವಿಜಯ ವಿಠಲ ಹರಿಯ। ಸನ್ನುತಿ ಪರಮಹಿಮೆ ಬಣ್ಣಿಸಿ। ಗುಣಿಸುವ ನಾರೊ ॥2॥

### ತ್ರಿವಿಡಿತಾಳ

ಅರವಿಂದದಬಳಿಯ ಖದ್ಯೋತಕ್ರಿಮಿ ಬಂದು ಹರಿದಾಡುತಿರಲಾಗ ಅದೆ ಕಾಲದಲಿ। ತರಣಿ ಉದ್ಭವನಾಗೆ ಮುದದಿಂದ ಸರಸಿಜ। ಅರಳಲು ಕಾಣುತಲಾ ಖದ್ಯೋತವು ಹರುಷ ಬಡುವದೆಂದು ನರನು ನುಡಿಯಲದರ ಚರಿತೆ ತಿಳಿಯದೇನೊ ನೋಳ್ಪರಿಗೆ। ಮರುಳೆ ಮನವೆ ಕೇಳು ಕವನಾ ನಿನ್ನ ಕೃತಿ। ! ಹಿರಿದಾಗಿಪ್ಪದೆಂದು ಹಿಗ್ಗದಿರು। ಎರಡರ ಪೆಸರು ಒಂದಾದರು ಮಹಖ್ಯಾತಿ। ಬರುವದು ತರಣಿಗಲ್ಲದೆ ಖದ್ಯೋತಕೇನು। ಗುರುವಿಕೆತನ ಸಲ್ಲ ವಿಜಯ ವಿಠ್ಠಲ ರೇಯನ। ಶರಣರ ಕೃಪೆಯಿಂದಲಿ ಭಾಗ್ಯ ನಿಜವೆನ್ನು॥3॥

### ಅಟ್ಟತಾಳ

ಪರಮದರಿದ್ರನು ಬಹುರೋಗಿಷ್ಟನು। ನಿರುತ ನಿಂದಕನು ಮಹ ದುಃಖಿಷ್ಟನೆಂದಿಗು । ಕುರುಡನು ಕಿವುಡನು ಕುಂಟನು ಮೂಕನು ನಾನಾ । ಪರಿವ್ಯಾಕುಲದ ವ್ಯಾಕುಲದ ವ್ಯಾಕುಲದವ। ಆರು ಇಲ್ಲದಿಪ್ಪ ಪರದೇಶಿ ಕೇವಲ ತೃಷಿ ಪೀಡಿತ ಕ್ಷುಧಾ। ತುರನಾಗಿ ಬ್ಯಾಸಿಗೆ ಬಿಸಿಲೊಳು ತಪಿಸುತ ಸ್ಮರಣೆಯು ಇಲ್ಲದೆ ನೀರಿಲ್ಲ ದಾರಣ್ಯದಿ । ಇರುತಿಪ್ಪ ಮಂದ ಮಾನವನ ತತ್ಕಾಲದಿ । ಭರದಿಂದ ಕೊಂಡೊಯ್ದು ಸಂಜೀವಾದ್ರಿಯಲ್ಲಿ । ಸುರತರುವಿನ ತಂಪು ನೆರಳೊಳಗೆ ಇಟ್ಟ। ತೆರದಂತೆ ಎನಗಿಂದು ಸೋತ್ತು ಮರಿಂದಲಿ । ದೊರಕಿತು ಇದೆ ಸುಖ ಸೌಖ್ಯವೆನ್ನು ಮನವೇ ಧರೆಯೊಳು ದೈವವಾದ ವಿಜಯ ವಿಠಲನ್ನ। ಮರಿಯಾದೆ ಜಿಂಹ್ವೆಯಲಿ ಕೊಂಡಾಡು ನಲಿದಾಡು ॥4॥

### ಆದಿತಾಳ

ಉಪಜೀವ ನಿನಗಿದೆ ಎಲೊ ಮನವೆ ಕೇಳು ಬಲು ಗುಪಿತದಲ್ಲಿ ಚರಿಸು ಅಂತರಂಗದಲ್ಲಿ। ಸುಪಥ ಬಯಸುತಿರು ಸುಜನರ ಬಿಡದಿರು। ಆಫಲ ಅಪಥನಾಗು ಅತಿ ಉಗ್ರ ಕರ್ಮವಬಿಡು । ಉಪಚಾರವೆನ್ನದಿರು ಹರಿದಾಸರು ಒಲಿದು । ಕೃಪೆ ಮಾಡಿದಲ್ಲದೆ ಬರಿದೆ ಬಾಹುದೆ ಸುಖ। ವಿಪುಲದೊಳಗೆ ಹರಿದಾಸನಾಗುವದಕ್ಕೆ । ಅಪರಿಮಿತವಾಗಿ ಸಾಧನ ದೊರೆಯಬೇಕೊ । ಉಪದೇಶ ಕರ್ತ ನಮ್ಮ ವಿಜಯ ವಿಠ್ಠಲರೇಯನ। ಜಪ ತಪ ಧ್ಯಾನದಲ್ಲಿ ಪೊತ್ತು ಪೋಗಾಡುವದು ॥5॥

### ಜತೆ

ಇಂದ್ರನಾಮಕರಾದ ದಾಸರೊಲಿದ ಮ್ಯಾಲೆ । ಚಂದ್ರಪ್ರಕಾಶ ಸಿರಿ ವಿಜಯ ವಿಠ್ಠಲ ಪೊಳೆವ ॥6॥



## ಸುಳಾದಿ 15

ಶ್ರೀವಾದಿರಾಜರ ಸ್ತೋತ್ರ ರಾಗ ಶಂಕರಾಭರಣ ಧ್ರುವತಾಳ

ಮಾಧವ ನಂಘ್ರಿ ನಿತ್ಯ ಮೋದದಲ್ಲಿ ಭಜಿಪ। ಸಾಧು ಸನ್ಮುನಿವರ್ಯ ಸಮ್ಮೋದ ತೀರ್ಥರಪಾದ। ಸಾದರದಿಂದ ಭಜಿಸಿ ಮೇದಿನಿಗೆ ಭಾರ। ವಾದ ಮಾಯಾ ವಾದಿಗಳ ಗೆದ್ದ। ವಾದಿರಾಜರ ಮಹಿಮೆ ವರ್ಣಿಸಲರ್ಹನಲ್ಲಾ ಮಾಧವ ವೇದ ವೇದ್ಯ ವಿಜಯ ವಿಠಲ ತಾನು ಆದರದಿಂದವರ ಭುಜದಿ ಹಯವಕ್ತ್ರನಾಗಿ। ಪಾದವನ್ನು ಇಟ್ಟು ಸ್ವಾದವಾದ ಕಡಲಿಹೂರಣ ವನುವುಂಡ। ಶ್ರೀಧನ ಮಹಿಮೆ ಸಾಧು ಜನರು ಕೇಳಿ ॥1॥

### ಮಟ್ಟತಾಳ

ಕಡಲಲ್ಲಿ ಪವಡಿಸಿದ ಒಡಿಯ ತಾ ಪೊಡವಿಯಲಿ। ಮೃಡನುತ ಗೋವಿಂದ ಜಡಧರಿವಾಣದಲ್ಲಿ ಕಡಲಿ ಸಕ್ಕರೆ ಬೆರೆಸಿ ಲಡ್ಡುಗೆಯ ಮಾಡಿದ। ಸಡಗರದ ಭಕ್ಷಪಾಯಸ ಘೃತ ನೀಡೆ। ಒಡಿಯನು ಬ್ರಹ್ಮಾದಿ ಪರಿವಾರ ಸಹಿತುಂಡು। ಕಡಗೋಲು ನೇಣು ಪಿಡಿದುಡುಪಿಲಿನಿಂದ। ಉಡುರಾಜ ಮುಖ ನಮ್ಮ ವಿಜಯ ವಿಠಲನು। ಬೆಡಗು ಕಾರ್ಯವನ್ನು ನಡೆಸಿದ ಬಗೆ ಕೇಳಿ ॥2॥

### ತ್ರಿವಿಡಿತಾಳ

ತಾಮಸ ಗುಣಉಳ್ಳ ಪಾಮರ ಜನರಿಗೆ। ಈ ಮಹಿಮೆ ದೊರಕುವುದೇ ಸ್ವಾಮಿ ಸಿಲುಕುವನೆ। ಕಾಮಿಸಿ ಕೋಟಿ ವರುಷ ನಾಮ ನುಡಿಯೆ ಪರಂ। ಧಾಮ ದೊರಿಯದು ಭೂಮಿಯೊಳಗಿದ್ದ। ಭ್ರಾಮಕ ಜನರಿಗೆ ವಾಮದೇವನೆ ಹಿರಿಯನೆಂದು ಬುದ್ಧಿಯ ಕೊಡುವ। ಕಾಮಾರಿ ವಂದ್ಯ ನಮ್ಮ ವಿಜಯ ವಿಠಲನು ಸಾಮಾನ್ಯ ಜನರಿಗೆ ದೊರಕುವನೇ ಕೇಳಿ ॥3॥

### ಅಟ್ಟತಾಳ

ಅಜ ಸತ್ಯ ಲೋಕಾಧಿಪತ್ಯವನ್ನು ಮಾಡಿ ದಿಗ್ವಿಜಯ ಮಾಡಲು ಪುರಕೆ। ನಿಜ ಸುಜ್ಞಾನ ಪೂರ್ಣಪ್ರಜ್ಞರೆಂಬೊ ಮುನಿಯು। ಅಜನ ಪದಕೆ ಬಂದು ಅಖಿಳರ ನಾಳಿದಾ। ನಿಜ ವಾಯು ಹನುಮ ಭೀಮ ಮಧ್ವನೆನಿಸಿದ। ವಿಜಯ ಸಾರಥಿ ಪಾದ ರಜದ ಮಹಾತ್ಮೆಯಿಂದ। ಗಜವೈರಿ ಭಂಜನ ವಿಜಯ ವಿಠಲನ್ನ। ಭಜನಿಯ ಗೈಯುತ

ಬಹುಕಾಲದಿ। ಋಜುಗುಣಪಜ್ಜೆಯೊಳಗೆ ಕುಳಿತಾ। ನಿಜ ನಿರ್ಮಲ ಸುಜ್ಞಾನ ಧ್ಯಾನದಿಂದ ಜ್ಞಾನ ಪಕ್ವಾದ ಮನವುಳ್ಳ । ಸುಜನ ಶಿರೋಮಣಿ ವಾದಿರಾಜನು ತಾ । ನಿಜವಾಗಿ ಬೊಮ್ಮಾಂಡ ಪುರಾಣ ಸಾಧಕದಿಂದ । ಅಜಪದ ಸಲ್ವದು ಲೇಶ ಸಂಶಯ ಬೇಡಿ । ನಿಜ ನಿಜ ನಿಜವೆಂದು ನಿತ್ಯದಿ ಕೊಂಡಾಡಿ ॥4॥

ಆದಿತಾಳ

ಮನ ಶುದ್ಧರಾಗಿ ಮಾಧವನಂಘ್ರಿಯನು। ದಿನ ದಿನದಲ್ಲಿ ನಂಬಿಕೊಂಡಿಪ್ಪರೆ। ಅನವರತಾನಂದ ಗುರು ಮಧ್ವರಾಯರ ದಿವ್ಯ । ವನಜ ಪಾದಂಗಳ ಸ್ಮರಿಸಲು । ಹನುಮೇಶ ನಮ್ಮ ಸಿರಿ ವಿಜಯ ವಿಠಲ ತಾನು। ಮುನಿವಾದಿರಾಜರ ಸಾಮಾನ್ಯರೆಂತೆಂದು । ಏಣಿಸಿದವರನ್ನು ಘನವಾಗಿ ಶಿಕ್ಷಿಪ । ಇನತನೋದ್ಭವ ಕೋಪದಿಂದೀ ಕಾರಣ ಮಹಿಮಿ । ಯನು ಕೊಂಡಾಡಿ ಅನುದಿನ ಸುಜನರು ॥5॥

ಜತೆ

ಮೋದ ತೀರ್ಥರ ಮತ ಸೇನಾಧಿಪತಿಯಾದ। ವಾದಿರಾಜ ಮುನಿಯು ವಿಜಯ ವಿಠಲನ ದಾಸಾ ॥6॥



## ಸುಳಾದಿ 16

## ಶ್ರೀ ವ್ಯಾಸರಾಯರ ಸ್ತೋತ್ರ

ರಾಗ ಕಲ್ಯಾಣ ಧ್ರುವತಾಳ

ಒಂದು ದಿವಸ ನಾರದ ಮುನೀಶ್ವರ ನಂದಗೋಪನ ಕಂದ ಇಂದಿರಾರಮಣನ । ಸಂದುರಶನ ಮಾಡಿ ಬಂದ ಹರಿ ವರ್ಷ । ವೆಂದೆಂಬೊ ಖಂಡ ದೊಳಾನಂದಗಾಯನದಿಂದ । ನಿಂದು ನರ ಮೃಗಗೆ ವಂದಿಸಿ ತೆರಳುತಿರೆ । ಅಂದು ಪ್ರಲ್ಹಾದನು ದ್ವಂದ್ವ ಪಾದಕೆರಗಿ । ಇಂದು ದ್ವಾರಕಾಪುರದಿಂದ ಪೊರಟು ನಡೆ । ತಂದ ವಾರ್ತೆ ಎನಗೊಂದುಸರಲಿಲ್ಲ ದೀನ । ಬಂಧು ಎನಿಸಿಕೊಂಬ ವೃಂದಾರಕ ಮುನಿ । ಮುಂದುಗಾಣದಲೆ ಕಣ್ಣಿಂದ ಭಾಷ್ಪೋದಕ । ಬಿಂದುಗಳುದರಿಸುತ ನಂದ ನಂದನ ಚರಿತೆ । ಒಂದೊಂದು ಪೇಳಲದರಿಂದ ಮೈಮರೆದು ಹೋ । ಎಂದು ಶಿರವ ದೂಗಿ । ಮುನಿಗೆ ಎರಗಿ । ಕಂಧರ ಬಾಗಿ ನಾನೆಂದಿಗೆ ಕೃಷ್ಣನ । ವಂದಿಸುವೆ ನೆನಲು ಮಂದಹಾಸದಿಂದ । ಮಂದರೋದ್ಧರ ವಿಜಯ ವಿಠಲ ಯಶೋದೆ । ಕಂದನ ಲೀಲೆಯಾನಂದ ಪೇಳೆನೆ ಮುನಿ । ಅಂದು ವಿವರಿಸಿದ ಅಂದವಾಗಿ ನಲಿದು ॥1॥

### ಮಟ್ಟತಾಳ

ಸಕಲ ದೇವರೊಳು ರುಗ್ಮಿಣಿ ಅರಸನ್ನ । ಸುಖ ಸಮುದಾಯಕ ಅಕಟ ನಾನೆಂಬೆ । ಸಕಲ ಭೂಷಣ ಸುರನಿಕರ ಸಂದಣಿಯಲ್ಲಿ । ಮುಕುತಾ ಮುಕುತರ ಸೇವಕರ ಕರದಿಂದ । ಅಕಳಂಕನಾಗಿ ಸಕಲ ಸೇವಿಯಗೊಂಬ । ಮಕ್ಕಳ ಮಾಣಿಕ ರಂಗ ವಿಜಯ ವಿಠಲನ್ನ । ಭಕುತರೊಳಗ್ರಣಿ ಯುಕುತಿಲಿ ಪೇಳಿದನು ॥2॥

### ತ್ರಿವಿಡಿತಾಳ

ಹರಿಯ ಪಾದಕ್ಕೆರಗಿ ವರ ಪ್ರಲ್ಹಾದನು । ಎರಡೊಂದು ಮಾರ್ಗದಲ್ಲಿ ಕೃಷ್ಣನ ಮೂರುತಿಯ । ಪರಿ ಪರಿಯಲ್ಲಿ ಭಜಿಸಿ ಧನ್ಯನಾಗುವೆನೆಂದು । ಸುರಮುನಿಗೆರಗಿ ನಿಂದಿರಲಾಗಿ ನಾರದ । ಕರುಣದಿಂದಲಿ ಉತ್ತರವ ಪೇಳಿದನಾ ನೀ । ಧರೆಯೊಳು ಜನಿಸುವ ವರವ ಪಡೆದು ಇಪ್ಪೆ । ಪರಮ ಭಾಗವತರ ವರ ಮಣಿಯೆ ನೀನು ಧಾರುಣಿಯೊಳಗವತರಿಸಿ ಅಧಿಕವಾದ । ಮಾರುತ ಮತದೊಳಗೆ ಚರಿಸಿ ಕೃಷ್ಣನ ಪೂಜೆ । ನಿರುತ ಬಿಡದೆ ಮಾಡಿ ಹರುಷಬಡೆಂದೆನಲು ಕರುಣ ವಾರಿಧಿ ನರಹರಿ ವಿಜಯ ವಿಠಲನ್ನ । ಸ್ಮರಿಸಿ ಶೇಷಾಂಶ ಧರಿಸಿ ದೇಹವ ತಾಳ್ದಾ ॥3॥

ಅಟ್ಟತಾಳ

ಬನ್ನೂರು ಸ್ಥಳದಲ್ಲಿ ಜನಿಸಿದರು ಬ್ರ। ಹ್ಮಣ್ಯ ತೀರ್ಥರ ಪಾವನ್ನಕರದಲ್ಲಿ ಸನ್ಮನವಾಗಿ ಪಾಲನವಾದರು ಮುನಿ । ರನ್ನ ಶ್ರೀಪಾದರಾಯನ್ನ ಬಳಿಯಲ್ಲಿ । ಚೆನ್ನಾಗಿ ವಿದ್ಯಾ ಸಂಪನ್ನರಾದರು ಬಲು । ಅನ್ಯ ಮತವ ಬೇವಾಟನ್ಯ ಮಾಡಿ ಸುಪ್ರ । ಸನ್ನ ಹರಿಯ ಕಾರುಣ್ಯವ ಪಡೆದರು । ಚೆನ್ನಾಗಿ ಕೃಷ್ಣ ಶ್ರೀ ವಿಜಯ ವಿಠಲನ್ನ । ಸನ್ನುತಿಸಿ ಧ್ಯಾನವನ್ನೆ ಕೈಕೊಂಡ ॥4॥

ಆದಿತಾಳ

ಗುರು ವ್ಯಾಸಮುನಿಯೆಂದು ಧರಣಿಯೊಳಗೆ ಪೆಸರಾಗಿ । ನೆರದು ಸಜ್ಜನರಿಗೆ ಗರದು ನ್ಯಾಯ ಶಾಸ್ತ್ರ । ಅರುಹಿ ವೈಷ್ಣವ ಮತ ಅದರಿಂದ ಉದ್ಧರಿಸಿ । ಪೊರೆದು ನಂಬಿದವರ ಎರಡೊಂದು ಜನ್ಮ ಸುಂದರ ಗರ್ಭದಲಿ ಬಂದು । ಪರಿಪೂರ್ಣ ಜ್ಞಾನ ಭಕ್ತಿ ವೈರಾಗ್ಯದಲ್ಲಿ ನಡದು । ಎರಡೊಂದು ಉತ್ತಮ ಗುರು ಸಂತತಿಯೊಳಗೆ । ಚರಿಸಿ ಚತುರಾಶ್ರಮ ಧರಿಸಿ ಚತುರರಾಗಿ ಭರತಖಂಡದೊಳು ಪಸರಿಸಿ ಕೀರ್ತಿಯ ಪಡೆದು । ಭರದಿಂದ ವಾಲಗವು ಸುರರಿಂದ ಕೈಗೊಳುತ । ಪರಲೋಕದಲಿ ಒಪ್ಪಿ ನಿರಾಮಯ ಗುಣನಿಧಿ ವಿಜಯ ವಿಠಲರೇಯನ । ನೆರೆನಂಬಿ ಪ್ರತಿದಿನ ಮೆರೆದು ಮೂರ್ಧನ್ಯ ರಾಗಿ ॥5॥

ಜತೆ

ಪ್ರಲ್ಹಾದನೇ ವ್ಯಾಸ ಮುನಿಯೇ ರಾಘವೇಂದ್ರ । ರಹುದೆಂದು ಭಜಿಸಿರೂ ವಿಜಯ ವಿಠಲ ವೊಲಿವಾ ॥6॥



## ಸುಳಾದಿ 17

## ಶ್ರೀಪಾದರಾಯರ ಸ್ತೋತ್ರ

ರಾಗ ರೇಗುಪ್ತಿ ಧ್ರುವತಾಳ

ಶ್ರೀಪಾದರಾಯ ಗುರುವೆ ದೃಢ ಭಕುತಿಯಿಂದ ನಿಮ್ಮ। ಶ್ರೀಪಾದ ಪದುಮವನ್ನು ನೆರೆನಂಬಿದವನ ಭಾಗ್ಯ । ಅಪಾರ ವಲ್ಲದೆ ಲೇಶ ಕೊರತೆ ಇಲ್ಲ। ಗೋ ಪಾದ ಉದಕದೊಳು ರತುನ ದೊರಕಿದಂತೆ। ಪ್ರಾಪುತವಾಗುವದು ಬಾಹೀರಂತರ ಸೌಖ್ಯ। ಲೋಪವಾಗದು ಒಂದು ಇಷ್ಟಾರ್ಥ ಪ್ರತಿದಿನ। ಆಪರ್ಥ ಎನಿಸದು ಪೇಳಿದವಚನಂಗಳು । ಅಪ ವರ್ಗಕೆ ಮಾರ್ಗ ಕೇವಲ ಖ್ಯಾತಿಯಾಗಿ । ತಾಪಸಿಯಾಗುವನು ಜನುಮ ಜನುಮ ಬಿಡದೆ । ಗೋಪಾಲ ಕೃಷ್ಣನ ಗುಣವೆ ಕೊಂಡಾಡುತ । ಆ ಪಾದ ಮೌಳಿ ಪರಿಯಂತ ನೋಡುವ ಮಹ। ಪಾಪರಹಿತರಾಗಿ ಸಂಚರಿಸುವರು ನಿತ್ಯ। ಪ್ರಾಪುತವಲ್ಲದೆ ಒಂದಾದರವರಿಗೆ । ಭೂಪಾರ ಬೇಡಿದ ಮನೋರಥಂಗಳು । ಶ್ರೀಪಾದರಾಯ ಶಿರಿನಾರಾಯಣಯೋಗಿ। ಈ ಪರಿ ಸ್ಮರಿಸಿದ ಜನರ ಸಂಗದಲ್ಲಿದ್ದ। ಆ ಪುಣ್ಯ ಪುರುಷನಿಗೆ ಕೈವಲ್ಯ ಇದ್ದಲ್ಲಿಗೆ । ಪೋಪಾದಲ್ಲ ಅವನ ಆಯುಷ್ಯ ವ್ಯರ್ಥವಾಗಿ । ಭಾಪು ಇವರ ಬಿರುದು ಪೊತ್ತು ತಿರುಗಿದರೆ । ಶಾಪಾದಪಿ ಶರಾದಪಿ ಎನಿಸಿಕೊಂಬ । ದೀಪದ ಬೆಳಕಿನಲ್ಲಿ ಸರ್ವವು ಕಂಡಂತೆ । ವ್ಯಾಪುತ ದರ್ಶಿಯಾಗಿ ಯೋಗ್ಯತದಂತೆ ಕಾಂಬ । ದ್ವಿಪಾದ ಪಶುಗಾಣೋ ಈ ಮುನಿಯು ನಂಬದವ । ಕೂಪಾರವೆಂಬುಮಹ ಘೋರದೊಳಗೆ ಇಪ್ಪ ಅಪತ್ಕಾಲ ಮಿತ್ರ ವಿಜಯ ವಿಠ್ಠಲರೇಯನ । ವ್ಯಾಪಾರವನ್ನೆ ನೆನೆದು ನಲಿ ನಲಿದಾಡುವ ॥1॥

### ಮಟ್ಟತಾಳ

ಭಕುತಿ ಬೇಕಾದವರು ಇವರ ಪಾದದಲ್ಲಿ। ಸಕಲಕಾಗೆ ಇದೇ ಸಾಧ್ಯವೆ ನಮಗೆಂದ । ಸಕುತನಾಗಲಿಬೇಕು ರಾಗಂಗಳ ತೊರೆದು । ಮುಕುತಿ ಮಾರ್ಗಕೆ ಇನ್ನು ಯಾತಕೆ ಅನುಮಾನ। ಕಕ್ಕುಲಾತಿಯಿಂದ ಕಂಡಲ್ಲಿ ತಿರುಗಿ। ಹಕ್ಕಲ ಮನಸ್ಸಿನಲ್ಲಿ ಕೆಟ್ಟು ಪೋಗದಿರಿ । ಲಕುಮಿರಮಣ ನಮ್ಮ ವಿಜಯ ವಿಠಲರೇಯನ। ಭಕುತರೊಳಗೆ ಮಹ ಮಹಿಮೆ ಎನಿಸಿಕೊಂಬಾ ॥2॥

### ತ್ರಿವಿಡಿತಾಳ

ನಂಬಿರೋ ಶ್ರೀಪಾದರಾಯರ ಚರಣವ । ಹಂಬಲಿಸದಿರೀ ಅನ್ಯ ಮಾರ್ಗ । ತುಂಬಿ ತುಳುಕುತಿಪ್ಪದು ಇಹ ಪರದ ಭಾಗ್ಯ । ಉಂಬುವದುಡು ವದು ಅಡಿಗಡಿಗೆ । ಡಿಂಬದೊಳಗೆ ಹರಿಯ ಧ್ಯಾನಂಗತನಾಗಿ ಕಾಂಬುವ ಲೇಶ ಪಾಪಂಗಳಿಲ್ಲದೆ । ಗಂಭೀರ ಸಂಸಾರವಾದರು ಅದೆ ಅವಗೆ । ಇಂಬು ಗೊಡುವದು ವೈದೀಕವೆನಿಸಿ । ಅಂಬುಜ ಸಖ ತೇಜ ವಿಜಯ ವಿಠಲರೇಯನ ಬೆಂಬಿಡದೆ ಭಜಿಸಬೇಕು ಈ ಪರಿಯಲ್ಲಿ ॥3॥

### ಅಟ್ಟತಾಳ

ಇವರ ಪ್ರಸಾದವಾದರೆ ವ್ಯಾಸಮುನಿರಾಯಾ ಕವಿರಾಯ ಪುರಂದರ ದಾಸರು ಮೊದಲಾ । ದವರ ಕರುಣವನ್ನು ಸಿದ್ಧಿಸುವದು ಕೇಳಿ । ನವ ಭಕುತಿ ಪುಟ್ಟುವದು ವ್ಯಕ್ತವಾಗಿ । ತವಕದಿಂದಲಿ ಚರ್ಮದೇಹ ಬರುವದು । ದಿವಿಜರು ವೊಲಿದು ಸತ್ಕರ್ಮ ಮಾಡಿಸುವರು । ಸುವಿರುದ್ಧರಾದ ಜನರೆಲ್ಲ ನೆರೆದು ಭಾಗ್ಯವನು ಬರಲಿ ಎಂದು ಕೊಂಡಾಡುವರು ನಿತ್ಯ । ಶ್ರವಣಕ್ಕೆ ತೋರುವ ವಿಜಯ ವಿಠಲರೇಯನ । ದಿವಾರಾತ್ರಿಯಲಿ ನೋಡಿ ಸುಜನರ ಕೂಡುವಾ ॥4॥

### ಆದಿತಾಳ

ನರಕ ನರಕದಲ್ಲಿ ಹೊರಳುವ ಆ ಮನುಜ । ಧರೆಯೊಳು ಇವರ ಚರಿತೆ ಒಂದೊಂದ್ಬುತವಾಗಿ ನಿರುತದಲ್ಲಿ ನೋಡೆ ತುಂಬಿಸೂಸುತಲಿವೆ । ಅರುಣೋದಯದಲೆದ್ದು ಶ್ರೀಪಾದರಾಯರೆಂದು । ಸ್ಮರಿಸಿದ ಮಾನವಂಗೆ ಸರ್ವಸಾಧನದಿಂದ । ಪರಮಗತಿಯಾದಂತೆ ಆಗುವದು ಸಿದ್ಧ ಪರಿಹಾಸವಲ್ಲ ಕೇಳಿ ಅನುಭವ ತಿಳಿದವಗೆ । ಸುರ ಭೂಸುರರ ಪ್ರಿಯ ವಿಜಯ ವಿಠಲನ । ಕರುಣದಿಂದಲಿ ಮಹಉನ್ನತದಲ್ಲಿಪ್ಪರೂ॥5॥

### ಜತೆ

ಧ್ರುವ ಮರಿಯದಲೆ ಇದನೆ ಓದಿದವಗೆ ಬಂದ । ಭವ ರೋಗ ಪರಿಹಾರ ವಿಜಯ ವಿಠಲ ವೊಲಿವಾ ॥6॥



## ಸುಳಾದಿ 18

## ಶ್ರೀ ಜಯರಾಯರ ಸ್ತೋತ್ರ

ರಾಗ ತೋಡಿ ಧ್ರುವತಾಳ

ಜಯರಾಯ ಜಯರಾಯ ಜಯದೇವಿ ಅರಸನ್ನಾಶ್ರಯಮಾಡಿ ಕೊಂಡಿಪ್ಪ ತಪೋವಿತ್ತಪ। ಭಯವ ಪರಿಹರಿಸಿ ಭವದೂರರ ಹರಿಭ। ಕ್ತಿಯ ಕೊಡು ಜ್ಞಾನ ವೈರಾಗ್ಯದೊಡನೆ। ದಯ ದೃಷ್ಟಿಯಿಂದ ನೋಡು ಕಾಪಾಡು ಮಾತನಾಡು। ಲಯ ವಿವರ್ಜಿತವಾದ ವೈಕುಂಠಕೆ। ಸ್ವಯ ಮಾಗಿ ಮಾರ್ಗ ತೋರು ಸಜ್ಜನರೊಳಗಿಟ್ಟು। ಜಯವ ಪಾಲಿಸು ಎನಗೆ ಯತಿಕುಲ ರನ್ನ। ಆಯುತಕ್ಕಾದರು ನಾನು ಐಹಿಕ ಸೌಖ್ಯವನೊಲ್ಲೆ। ಬಯಸುವೆ ಸತತದಲ್ಲಿ ಹರಿಯನಾಮ। ತ್ರಯಗಳೆ ನಾಲಿಗೆಲಿ ನೆನೆದು ನೆನೆದು ಕರ್ಮ। ಕ್ಷಯವಾಗುವಂತೆ ಕ್ಷಿಪ್ರದಲ್ಲಿ ಬಿಡದೆ। ಪ್ರಯತ್ನವೆಂಬೋದಿದಕೆ ಸಾರ್ಥಕವಾಗಲಿ। ಪಯೋನಿಧಿ ಸುತೆರಮಣ ಮನದೊಳು ನಿಲ್ಲಲು। ಪಯಃ ಪಾನದಿಂದಧಿಕ ನಿಮ್ಮ ದರುಶನ ಎನಗೆ। ಪ್ರಿಯ ಮತ್ತೊಂದಾವದಿಲ್ಲ ಇದೇ ಬಲು ಲಾಭ। ಗಯಾ ಕಾಶಿ ತ್ರಿಸಂಗಮ ಮೊದಲಾದ ತೀರ್ಥ ಕ್ಷೇತ್ರ ನಯದಿಂದ ಮಾಡಿದ ಫಲವೊಪ್ಪುದು। ಪಯೋಧರಗಳ ತಿನದಂತೆ ಮಾಳ್ಪುದು। ಹೃದಯದೊಳಗಿಪ್ಪ ದೆನಗೆ ಇದೇ ಏಕಾಂತ। ಭಯ ಕೃದ್ಭಯ ನಾಶ ವಿಜಯ ವಿಠಲನ ಸೇವೆಯ ಮಾಳ್ಪ ಸದ್ಗುಣಶೀಲ ಸುಜನ ಪಾಲಾ ॥1॥

ಮಟ್ಟತಾಳ

ಆವ ಜನುಮದ ಪುಣ್ಯ ಫಲಿಸಿತು ಎನಗಿಂದು। ರಾವುತನಾಗಿದ್ದ ಜಯತೀರ್ಥರ ಕಂಡೆ। ದೇವಾಂಶರು ಇವರ ಸ್ವರೂಪವನ್ನು। ಭಾವದಿಂದಲಿ ತಿಳಿದು ಕೊಂಡಾಡುವ ಬಲುಧನ್ಯ। ಪಾವಿನ ಪರಿಯನ್ನು ಇಲ್ಲಿ ಇರುತಿಪ್ಪ ಕಾವುತ ಭಕುತರನ ಪಾವನ ಗೈಸುವ। ದೇವ ದೇವೇಶ ಸಿರಿ ವಿಜಯ ವಿಠಲನಂಘ್ರಿ। ತಾವರೆ ಭಜಿಸುವ ನಿಷ್ಕಾಮುಕ ಮೌನಿ॥2॥

ತ್ರಿವಿಡಿತಾಳ

ವೈಷ್ಣವ ಜನ್ಮ ಬಂದುದಕಿದೇ ಸಾಧನ। ವಿಷ್ಣುವಿನ ಭಕುತಿ ದೊರಕಿದುದಕೆ। ನಷ್ಟವಾಯಿತು ಎನ್ನ ಸಂಚಿತಗಾಮಿ ಕರ್ಮ। ಕಷ್ಟ ದಾರಿದ್ರಗಳು ಹಿಂದಾದವೊ। ತುಷ್ಟನಾದೆನು ಎನ್ನ ಕುಲಕೋಟಿ ಸಹಿತ ಅ। ರಿಷ್ಟ ಮಾರ್ಗಕೆ ಇನ್ನು ಪೋಗೆ ನಾನು

। ಸೃಷ್ಟಿಯೊಳಗೆ ಇವರ ದರ್ಶನವಾಗದಲೆ । ಸ್ಪಷ್ಟವಾದ ಜ್ಞಾನ ಪುಟ್ಟದಯ್ಯಾ । ಇಷ್ಟುಕಾಲ ಬಿಡದೆ ಮುಂದೆ ಮಾಡುವ ಬಲು । ನಿಷ್ಟಗೆ ಅನುಕೂಲ ತಾತ್ವಿಕರು । ಶಿಷ್ಟಾಚಾರವನ್ನು ಮೀರದಲೆ ನಿಮ್ಮ । ಇಷ್ಟಾರ್ಥ ಬಯಸುವದು ಉಚಿತದಲ್ಲಿ । ವೈಷ್ಣವಾಚಾರ್ಯರ ಮತ ಉದ್ಧಾರಕರ್ತ । ಭ್ರಷ್ಟವಾದಿಗಳನ್ನು ನುಗ್ಗಲೊತ್ತಿ । ಕೃಷ್ಣವಂದಿತ ನಮ್ಮ ವಿಜಯ ವಿಠಲರೇಯನ । ಅಷ್ಟ ಕರ್ತೃತ್ವ ಸ್ಥಾಪಿಸಿದ ಧೀರಾ ॥3॥

## ಅಟ್ಟತಾಳ

ಕುಶರಾಯ ಇಲ್ಲಿ ತಪಸು ಮಾಡಿದಂಥ । ವಸತಿಯ ನೋಡಿ ದಿಗ್ದೇಶ ಜಯಿಸಿ ಮಾ । ನಸದಲ್ಲಿ ತಿಳಿದು ಅಕ್ಷೋಭ್ಯತೀರ್ಥರು ಇಲ್ಲಿ । ನಸುನಗುತಲೆ ವಾಸವಾದರು ಬಿಡದಲೆ । ಋಷಿಕುಲೋತ್ತಮರಾದ ಜಯರಾಯರು ನಿತ್ಯ । ಬೆಸನೆ ಬೆಸನೆ ಬಂದು ಗುಪ್ತದಲ್ಲಿ ಪೂ । ಜಿಸುವರು ಪ್ರೀತಿಲೆ ಏನೆಂಬೆನಾ ಚರ್ಯ ಶಶಿವರ್ಣದಂತೆ ಪೊಳೆವ ದರುಶನ ಗ್ರಂಥ । ರಸ ಪೂರಿತವಾಗಿ ವಿಸ್ತರಿಸಿದರು ವಿ । ಕಸಿತವ  ಮಾಡಿ ಕರದ ಕನ್ನಡಿಯಂತೆ । ಕುಶಲ ಮಾನವರಿಗೆ ಜ್ಞಾನ ಹೆಚ್ಚುವಂತೆ । ವಸುಧೆಯೊಳಗೆ ನಮ್ಮ ವಿಜಯ ವಿಠಲರೇಯ । ವಶವಾಗುವದಕ್ಕೆ ಪ್ರಸಾದ ಮಾಡಿದರು ॥4॥

## ಆದಿತಾಳ

ಈ ಮುನಿ ಪೊಲಿದರೆ ಅವನೆ  ಭಾಗ್ಯವಂತ । ಭೂಮಿಯೊಳಗೆ ಮುಕ್ತಿ ಯೋಗ್ಯನೆನಿಸುವನು । ಭೀಮ ಭವಾಂಬುಧಿ ಬತ್ತಿ ಪೋಗುವದು ನಿ । ಸ್ಸೀಮನಾಗುವ ಪಂಚ ಭೇದಾರ್ಥ ಪ್ರಮೇಯದಲ್ಲಿ । ತಾಮಸ ಜನರಿಗೆ ಭಕ್ತಿ ಪುಟ್ಟದು ದುಃ । ಖ ಮಹೋದಧಿಯೊಳು ಸೂಸುತಲಿಪ್ಪರು ಸ್ವಾಮಿ ಈಗಲೆ ಬಂದು ದುರುಳ ಮನುಜನ ನೋಡಿ ನಾ । ಮೊರೆ ಇಡುವೆನು ಕಾಯೊ ಕರುಣದಲ್ಲಿ ಯಾಮ ಯಾಮಕೆ ನಿಮ್ಮ ಸ್ಮರಣೆ ಪಾಲಿಸಿ ಉ । ತ್ತಮ ಬುದ್ಧಿ ಕೊಟ್ಟು ಕೃತಾರ್ಥನ್ನ ಮಾಡು । ರಾಮ ಸುಗುಣಧಾಮ ವಿಜಯ ವಿಠಲರೇಯನ್ನ । ನಾಮ ಕೊಂಡಾಡುವ ಟೀಕಾಚಾರ್ಯ ॥5॥

## ಜತೆ

ಮೇಘನಾಥ ಪುರ ಕಕುರ ವೇಣಿ ವಾಸ । ರಾಘವೇಶ ವಿಜಯ ವಿಠಲನ್ನ ನಿಜದಾಸ ॥6॥



## ಸುಳಾದಿ 19

## ಶ್ರೀವಾಯು ಮಧ್ವರಾಯ ಸ್ತೋತ್ರ

ರಾಗ ಮಾರವಿ ಧ್ರುವತಾಳ

ಮುನಿಗಳ ಮಸ್ತಕ ರತುನಾ ಭಾರತಿ ರಮಣಾ । ತೃಣ ಮೊದಲಾದ ವ್ಯಾಪ್ತನೆ ಪಾವನ ಶರೀರ । ಗುಣನಿಧಿ ಪವಮಾನಾ ಪವಮಾನಾ ಪಂಚಪರನಾ । ಅಣು ಮಹತ್ತು ರೂಪನೆ ಸನಕಾದಿಗಳ ಪ್ರೀಯ । ವನಜ ಜಾಂಡವನ್ನು ತಾಳವನೆ ಮಾಡಿ ಬಾರಿಸುವ । ಘನ ಸಮರ್ಥನೆ ಸಜ್ಜನ ಪಾಲ ಶುಭಲೋಲ । ಅನಿಲಾ ಪ್ರಧಾನ ವಾಯು ಹನುಮ ಭೀಮ ಮಧ್ವ। ಮುನಿ ಜ್ಞಾನ ದಾತಾ ಕರಣಾಭಿಮಾನಿಗಳ । ಗಣನೆ ಮಾಡದೆ ಗೆದ್ದ ಅನುಮಿತ್ತ ಬಂಧು ಜಗ। ಜ್ಜನಕ ಚತುರ ಹಸ್ತ ಮಿನಗುವ ಗದಾ ಪಾಣೆ । ದನುಜರ ಸದಾ ಬಡಿದ ರಣರಂಗ ಧೀರ ಶೂರ । ಇನ ಮೊದಲಾದ ಠಾವಿನಲಿ ಸರ್ವದಾ ತೇಜಾ । ವನಜಾರಿ ಕುಲಾಧೀಶ ಮನ ಮುದ್ದು ಪೂರ್ಣ ಪ್ರಜ್ಞಾ। ಪ್ರಣತಾರ್ತಿ ಹಾರಾ ಆರ್ಯಾ ಅನುಗಾಲ ಜಗದ್ಗುರು । ಜನುಮ ಜನುಮ ಸಾಧನ ಮಾಡಿಸುವ ಕರುಣೆ । ನೆನೆದವರಿಗೆ ಚಿಂತಾಮಣೆ ಸುರಧೇನು ತರುವೆ । ಪ್ರಣವ ಮೂರುತಿ ನಮ್ಮ ವಿಜಯ ವಿಠಲ ನಾರಾಯಣ ನಂಘ್ರಿ ಗುಪ್ತದಲ್ಲಿ ಮನದೊಳೆಣಿಪ ಮೌನಿ ॥1॥

ಮಟ್ಟತಾಳ

ನಿನ್ನಾಧೀನವೆ ಲೋಕಾ ನೀ ಹರಿಯಾಧೀನಾ । ನಿನ್ನ ಪ್ರೇರಣೆ ಜಗಕೆ ನಿನಗೆ ಪ್ರೇರಣೆ ಹರಿ। ನಿನ್ನಾಧಾರ ನಮಗೆ ನಿನಗಾಧಾರಾ ಹರಿ। ನಿನ್ನ ಬೆಳಗು ಜಗಕೆ ನಿನಗೆ ಬೆಳಗು ಹರಿ। ನಿನ್ನ ಧ್ಯಾನ ನಮಗೆ ನಿನಗೆ ಹರಿ ಧ್ಯಾನ। ನಿನ್ನ ಸ್ತೋತ್ರವೆ ನಮಗೆ ನಿನಗೆ ಹರಿಯ ಸ್ತೋತ್ರ। ನಿನ್ನ ಕಾಣ್ವೆ ನಾವು ನೀ ಹರಿಯನ್ನು ಕಾಣ್ವೆ। ನಿನ್ನ ಮಾಯವು ನಮಗೆ ನಿನಗೆ ಹರಿಯ ಮಾಯಾ। ನಿನ್ನೊಳಗೆ ಹರಿ ನೀನು ಹರಿಯೊಳಗೆ। ಅನ್ಯೋನ್ಯವಾಗಿ ಭಕುತರ ಮನದಲ್ಲಿ। ಕಣ್ಣಿಗೆ ಪೊಳೆವುತ್ತ ಪೊಳೆದಾಡುವ ಪ್ರಾಣ। ಚಿಣ್ಣವತಾರ ಶ್ರೀ ವಿಜಯ ವಿಠಲಂಗೆ ಅವಿ। ಚ್ಛಿನ್ನಭಕ್ತನಾದ ಸನ್ಯಾಸಿಗಳೊಡಿಯಾ ॥2॥

ರೂಪಕತಾಳ

ಕಲಿ ಮೊದಲಾದ ಖಳರು ಸತ್ಕರ್ಮವಾ ಮಾಡುವ । ಹಳಿದು ಯೋಚನೆ ಮಾಡಿ ಮಣಿಮಂತನೆಂಬವನ । ಬಲವಂತನಹುದೆಂದು ಕರೆದು ಉಪದೇಶಿಸಿ ।

ಇಳಿಯೊಳು ಜನಿಸಿ ಭೇದಾರ್ಥ ಜ್ಞಾನವೆಲ್ಲ ಅಳಿದು ಸಜ್ಜನರನ್ನು ಮಂದಮತಿಗಳ ಮಾಡಿ । ಕುಲ ಮರಿಯಾದಿಗಳ ಕೆಡಿಸಿ ಜಗವ । ಬಲು ಮಿಥ್ಯಾವೆಂದು ಸ್ಥಾಪಿಸಿ ಜೀವೇಶಗೆ ಐಕ್ಯ । ತಿಳಿಸಿ ಪರಗತಿಯ ಮಾರ್ಗ ತೋರದಂತೆ । ಹೊಲೆಗಲಿಸ ಪೋಗೆಂದು ಮನ್ನಿಸಿ ಮುದದಿಂದ ಪೇ । ಳಲು ಹರುಷವ ತಾಳಿ ಖಳನು ಮನ । ದೊಳು ನೆನೆದಾ ನಿಲಸಾ ನಿನ ಆಂದಿನ ವೈರ । ಒಳಿತೆಂದು ಕೈಕೊಂಡು ವಿಜಯ ವಿಠಲನ್ನ । ಸುಲಭ ಭಕ್ತರ ಮತಿ ಅಳಿದು ಬಿಡುವೆನೆಂದು ॥3॥

ಝಂಪಿತಾಳ

ಚರಣಡಿ ಎಂಬೊ ಗ್ರಾಮದಲಿ ವಿವಶಳಾಗಿ । ಚರಿಸುವ ಸ್ತ್ರೀಯಳಲ್ಲಿ ಜನಿಸಿಬಂದು । ದುರುಳ ಸಂಕರನೆಂಬೊ ನಾಮದಲ್ಲಿ । ಧರೆಯೊಳಗೆ ಮೆರದು ಮನೊವಾಚಾಕಯದಲ್ಲಿ ತಾನಾಗ । ಎರಡೆಂಬೊ ವಾಕ್ಯವನ್ನು ಪೇಳದಲೆ । ತಿರುಗಿದನು ಬಹುಬಗೆ ದುಃಶಾಸ್ತ್ರವನೆ ರಚಿಸಿ । ಶಿರ ಬಲಿತು ಧರ್ಮಗಳ ನಿರಾಕರಿಸಿ । ಪರಮಾತ್ಮಗೆ ನಿರ್ಗುಣ ಪೇಳಿ ಉತ್ತಮ । ಪರವೆಲ್ಲ ಜೀವದಲ್ಲಿ ಸಾಧಿಸುತ್ತ । ಇರಲು ಸಜ್ಜನರೆಲ್ಲ ಹಸಗೆಟ್ಟು ಕೇವಲ । ಮೊರೆ ಇಡಲು ಹರಿ ಕರುಣದಿಂದ ನೀನು ಸುರರು ಪೊಗಳಲಾಗಿ ವಿಜಯ ವಿಠಲನಾಜ್ಞ । ಶಿರದಲ್ಲಿ ಧರಿಸಿ ಅವತರಿಸಿದ ವೃಕೋದರ ॥4॥

ತ್ರಿವಿಡಿತಾಳ

ಜನಿಸಿದೆ ಪರಶುಕ್ಲ ತ್ರಯನೆ ವೇಗದಿ ನಡು । ಮನೆಯ ಬ್ರಾಹ್ಮಣ ನಿಜ ನಾರಿಯಲ್ಲೀ । ತನಯ ಲೀಲೆಯ ತೋರಿ ಹುರುಳಿ ಗುಗ್ಗರಿ ಮೆದ್ದು । ಜನನಿ ಗಾಶ್ಚರ್ಯವ ಮಿಗಿಲೆನಿಸಿ । ಕುಣಿದಾಡಿ ಬಲಿವರ್ಧನನ ಸಂಗಡಪೋಗಿ ಹುಣಿಸೆ ಬೀಜದಲಿ ಸಾಲವನೆ ತಿದ್ದಿ । ತೃಣ ಮಾಡಿ ಶಿವ ಶಾಸ್ತ್ರಿಯನು ಸೋಲಿಸಿ ಆ । ಕ್ಷಣದಲ್ಲಿ ಯತಿಯಾದೆ ಜನಕನಿಂದ । ಫಣಿಯಾದ್ಯರಿಗೆ ಗುರುವಾದ ನಾರಿಯ ರಮಣ । ಅನುಸರಿಸಿ ಅಚ್ಯುತ ಪ್ರೇಕ್ಷಕನಲ್ಲಿ । ವಿನಯದಲ್ಲಿ ಪೋಗಿ ನಿಯಮನಾಗಿ ಶಿಷ್ಯ । ತನ ಪಡದಿ ಮಧ್ವಾಖ್ಯ ನಾಮದಲ್ಲಿ । ಅನಿಮಿಷ ನದಿಯ ದಾಟಿ ಭೂ ಪತಿಯ ವಂಚಿಸಿ । ಬಿನಗು ಚೋರರನ್ನು ಮೋಸ ಗೊಳಿಸೀ । ಮನೋ ವೇಗದಲ್ಲಿ ಮಹಾ ಬದರಿ ಕಾಶ್ರಮದಲ್ಲಿ ದನುಜಾರಿ ಇರೇ ಪೋಗಿ ನಮಿಸಿ ವಿದ್ಯಾ । ಅನುವಾಗಿ ಕಲೆತು ಸರ್ವದ ಅಲ್ಲಿದ್ದ । ಸರ್ವ । ಮುನಿಗಳಿಂದ ಪೂಜೆಗೊಂಡು ತೆರಳಿ । ಜನುಮ ರಹಿತ ವ್ಯಾಸ ಮುನಿಯನ್ನೆ ಕಂಡು ವಂ । ದನೆ ಮಾಡಿ ಎಂಟು ಮಳಲ ಮುಟ್ಟಿಗೆ । ಯನು ಪಡೆದು ಬಂದೆ ರಜತಪೀಠ ಪುರದಲ್ಲಿ ।

ಇನನಂತೆ ಪೊಳೆವ ಆನಂದ ತೀರ್ಥಾ। ಗುಣಪೂರ್ಣ ಅನಂತೇಶ್ವರ ವಿಜಯ ವಿಠಲನ್ನ ಅನುದಿನ ನೆನೆಸುವ ವೈಷ್ಣವಾಚಾರ್ಯಾ ॥5॥

ಅಟ್ಟತಾಳ

ವಸುಧಿಯೊಳಗೆ ರಕ್ಕಸರೂಪ ಸಂಕರ। ಮಸದು ಮತ್ಸರಿಸಿ ತಾಮಸ ಶಾಸ್ತ್ರಗಳು ನ್ಯಾವ। ರಿಸಿ ನಿರ್ಮಲ ಜ್ಞಾನ ಪುಶಿಯಂದು ವರದು ವೊ। ಲಿಸಿಕೊಂಡು ಅವರಿಗೆ ಭಸುಮವ ಬಡಿಸಿ ವೆ। ಕ್ಕಸನಾಗಿರಲಿತ್ತ ಶ್ವಸನಾವತಾರನೆ। ನಸುನಗುತ್ತ ವೇಗ ದಶಪ್ರಕರಣ। ರಂಜಿಸುವ ಸೂತ್ರವೆ ನಾಲ್ಕು। ದಶ ಉಪನಿಷತ್ ಎಸವಾಖುಗ್ಗಾಗೀತಾ। ಹಸನಾದೆರಡು ಭಾಷ್ಯ ತ್ರಿಸ ತಾತ್ಪರ್ಯವು। ಎಸಳು ಯಮಕ ಭಾರತಾಗಮ ಸದಾಚಾರ। ಕುಶಲ ಸ್ಮೃತಿ ದ್ವಾದಶಸ್ತೋತ್ರ ಕೃಷ್ಣ ಸು। ರಸ ಮಹಾರ್ನವ ಮಿಸಣೆಪ ತಂತ್ರ ಸಾರ ವಸುದೇವಸುತ ಜನಿಸಿದ ನಿರ್ಣಯ ಮತ್ತೆ। ಖುಷಿಕಲ್ಪ ನರಸಿಂಹ ಪೊಸಬಗೆ ನಖಸ್ತುತಿ। ನಿಶಿಕರನಂತೆ ಶೋಭಿಸುವ ಮೂವತ್ತೇಳು। ರಸ ಪೂರಿತಾದ ದರುಶನ ಗ್ರಂಥಗಳು ರ। ಚಿಸಿ ಏಕ ವಿಂಶತಿ ಅಸುರ ಭಾಷ್ಯಗಳ ಖಂ। ಡಿಸಿ ವಾದಿಗಳ ಭಂಗಿಸಿ ಸೋಲಿಸಿ ಚತು। ರ್ದಶ ಲೋಕಕ್ಕೆ ದೈವ ಝುಷಕೇತು ಪಿತನೆಂದು। ಬೆಸಸಿ ಡಂಗುರವ ಹೊಯಿಸಿ ಬಿರದನೆ ಎ। ತ್ತಿಸಿ ಸುಜನರ ಉದ್ಧರಿಸಿ ಪೊಗಳಿಸಿಕೊಂಡು। ದಶ ದಿಕ್ಕಿನೊಳು ಕೀರ್ತಿ ಪಸರಿಸಿ ಮೆರೆವ ವಿ। ಕಸಿತ ವದನ ತ್ರಿದಶರ ಮನೋಹರಾ। ಹಸಿದವನಂತೆ ಭುಂಜಿಸಿದೆ ಕದಳಿ ಫಲ। ವಶವೆ ಪೊಗಳಲು ಮಾನಿಸಗೆ ನಿಮ್ಮ ಮಹಿಮೆ। ಶಶಿಕೋಟಿ ಲಾವಣ್ಯ ವಿಜಯ ವಿಠಲನಂಘ್ರಿ। ವಶ ಮಾಡಿಕೊಂಡ ಸಂತಸ ಜ್ಞಾನ ದಾತಾ ॥6॥

ಆದಿತಾಳ

ದುರುಳ ಮೋಹಕ ಶಾಸ್ತ್ರಗಿರಿಗೆ ಕುಲಿಶನೆನಿಶಿ। ತರಿದು ಸಿದ್ಧಾಂತ ಮತ ಪರಮ ತತ್ವವೇ ತಾ। ತ್ಪರ್ಯ ಗುಣ ತಾರತಮ್ಯ ಅರುಹಿ ಮುಕ್ತಿಗೆ ದಾರಿ। ಕರದು ಕರದೊಳು ತೋರಿ ಎರಡಾರು ಪುಂಡ್ರಮುದ್ರೆ। ಧರರ ಮಾಡಿ ಪಾಮರರ ಪಾಲಿಸಿ ತಾಮಸರ ತಮಸಿಗೆ ಅಟ್ಟಿ। ಸಿರಿ ಪತಿ ಪ್ರೀತಿ ಬಡಿಸಿ ಶರಧಿಯೊಳಗೆ ಹಡಗ। ಬರುತ ನಿಲ್ಲಲು ನೋಡಿ ಕರೆದು ಗೋಪಿ ಚಂದನ। ಕರಣೆ ತೆಗೆದುಕೊಂಡು ಭರದಿ ದ್ವಾದಶ ಸ್ತೋತ್ರವ ಮಾಡುತ ಅ। ದರ ವಳಗುಳ್ಳ ಸೋದರ ಮಾವನ ವೈರಿಯ। ನಿರಿಕ್ಷಿಸಿ ಮಧ್ವಸರೋವರದಲ್ಲಿ ತೊಳೆದು ನಿಂ। ದಿರಿಸಿ ರಜತ ಪೀಠ ಪುರದಲ್ಲಿ ಉತ್ಸಾಹದಿ ಸರಸದಲಿ ಪೂಜಿಸಿ। ತರುವಾಯರ್ಚನಿಗೆ ನಾಲ್ಕೆರಡು ಸನ್ಯಾಸಿಗಳ। ಕರಕಮಲದಿಂದ ಪಡೆದೆ ವರ

ಆದಿತಾಳ

ಕಾಯವನಿತ್ತವಗೆ ನಾರಾಯಣನು ವೊಲಿದು ಕಲ್ಪ। ಆಯುವನಿತ್ತು ಸರ್ವದ ಐಶ್ವರ್ಯದಲ್ಲಿ ಯಿಟ್ಟು। ಕಾಯಿದಾತಾ ನವನ ಮನಿಯ। ಸ್ಥಾಯವಾಗಿ ಬಾಗಿಲೊಳು ಈಯಬಲ್ಲ ದೇವ ತನ್ನ ಮಾಯಾದಿಂದ ಜನರ ಮೋಹಿಸಿ ಶ್ರೀಯರಸ ವಿ। ಜಯವಿಠಲ ನಾಯಕ ಶಿರೋಮಣಿ। ಶ್ರೇಯಸ್ಸನೀವ ತನ್ನ ಗಾಯನ ಮಾಡುವರಿಗೆ ॥7॥

ಜತೆ

ಇಂದ್ರಂಗೆ ಸುರ ಪದವಿ ಕೊಡಿಸಿ ಬಲಿಗೆ ವೊಲಿದಾ। ಕಂದರ್ಪ ಪಿತ ನಮ್ಮ ವಿಜಯ ವಿಠಲ ವಟು ॥8॥

★★★

## ಸುಳಾದಿ 39

## ಶ್ರೀ ಪರಶುರಾಮ ದೇವರ ಸ್ತೋತ್ರ

ರಾಗ ಸಾರಂಗ ಧ್ರುವತಾಳ

ಸತ್ಯವತಿ ಪುತ್ರಾ ದುರ್ಗಾ ಕಳತ್ರ ನಿಜ। ಸತ್ಯ ಸಂಕಲ್ಪ ಸಿದ್ಧ ಸೂರಿ ಪ್ರಸಿದ್ಧ। ನಿತ್ಯ ನಿಸ್ಸಂಗಾ ನಿರ್ವಿಕಾರ ಗುಣ ತರಂಗ। ಭೃತ್ಯವತ್ಸಲ ಲೀಲಾ ಭೃಗುಕುಲ ಪಾಲಾ। ದೈತ್ಯ ಜಾತಿ ಮರ್ದನ ಸದ್ಧರ್ಮ ವರ್ಧನಾ। ಅತ್ಯಂತ ಪರಾಕ್ರಮ ರಾಮ ರಾಮಾ। ಸತ್ಯ ಲೋಕೇಶ ನಯ್ಯಾ ಸತತ ವಿಜ್ಞಾನ ಕಾಯಾ। ಮೃತ್ಯುಂಜಯ ನಿಂದು ಜಯವೆನೆ ಸುರವೃಂದಾ। ತೌತ್ಯನೆ ರಾಜ ರಿಪು ಬಲು ಧನ್ಯಾ। ಹತ್ಯಾದಿ ದೋಷ ದೂರ ಭೂಭಾರವನ ಕುಠಾರಾ। ನೃತ್ಯ ಗೀತಕೆ ವೊಲಿದಾ ದೇವರ ದೇವಾ। ಇತ್ಯರ್ಥ ಕಂಡವನಾರು। ಎಂದಿಗೆ ನಿನ್ನ। ಗತ್ಯಾದಿ ಮಿಗಿಲಾದ ಪ್ರವರ್ತಕಾ। ದ್ವಿತ್ಯಕ್ತ ಮಾಡಿಸು ಪರಿಣಾಮ ಚಿತ್ತ। ಸತ್ಯವಾಗಲಿ ನಿನ್ನಂಘ್ರಿಯಲಿ। ಸತ್ಯರ್ಥ ಮುಕುತಿಗೆ ಸಾಧನಾ ಧನಾ ವೈಪ। ರಿತಳ ಇಲ್ಲವು ಕಾಣೋ ಕಮಲಾ ಕಾಂತಾ। ಅತ್ಯಧಿಕ ದೈವಾ ವಿಜಯ ವಿಠಲರೇಯಾ। ಕೃತ ಕೃತ್ಯನ್ನ ಮಾಡು ನಿನ್ನ ದಾಸರೊಳು ಪೊಂದಿಸಿ ॥1॥

ಮಟ್ಟತಾಳ

ರಾಮಾ ರಾಮಾ ಪೂರ್ಣ ಕಾಮಾ ಕಾಮಿತ ಫಲದಾ। ಜಾಮದಗ್ನಿ ಅಗ್ನಿ ನೇಮಕ ಪರಶುಧರಾ। ರಾಮ ವಲ್ಕಲ ವಾಸ ರಾಮಣೀಯ ಸರ್ವ। ಸಾರ್ವಭೌಮ ಪೂರ್ಣ ಪೂರ್ಣಾ ।ಭೂಮಿ ನಾಥಾ ತಾಮಸ ಗುಣ ಹಾರಿ। ಧೂಮಕೇತು ವರ್ನ ಸ್ವಾಮಿ ಅಂತರ್ಯಾಮಿ। ಸಾಮಸ್ತ ಘನ ಶೌರಿ ರಾಮ ರಾಜೀವಾಕ್ಷಾ। ಸೋಮ ಕುಲ ವೈರಿ ವಿಜಯ ವಿಠ್ಠಲ ರಾಮಾ। ಕಾಮಧೇನು ಸತತ ಮನದಲಿ ನೆನೆದವಗೆ ॥2॥

ತ್ರಿವಿಡಿ ತಾಳ

ಮುನಿ ಕುಲೋದ್ಭವ ರಾಮಾ ರೇಣುಕಾನಂದನಾ। ಧನುರ್ಧಾರಿ ಖಡ್ಗ ಚರ್ಮಧಾರಿಯೆ। ರಣ ಭಯಂಕರ ಚಂಡ ಪ್ರಚಂಡ ಉದ್ದಂಡಾ। ಶೆಣೆಸಿದವರ ಗಂಡಾ ರಿಪು ಭೇರುಂಡಾ।ಗಣಣೆ ಗಾಣೆಸೊ ನಿನ್ನ ಪ್ರತಾಪ ತನಕೆ ತ। ಲ್ಲಣೆಸುತಿದೆ ರಾಯಾ ಕುಲ ಸಾಗರಾ। ಜನಕನ ಮಾತನು ಲಾಲಿಸಿ ಭ್ರಾತಾರಾ। ಜಾನನಿಯ ತರಿದು ಮುಗುಳೆ ಉಳಹಿದೆ। ಜನನ ಮರಣ ಶೂನ್ಯ ರಾಮ ಭಾರ್ಗವರಾಮ। ಬಿನಗು ದೈವಂಗಳು ನಿನಗೆ ಸಮನೆ। ಅನಿಮಿಷ ತತಿ ಅಭ್ರದಲ್ಲಿ ನಿಂದು ಬಾಗಿ। ನೆನ

ನೆನದುಘೇಯನೆ ನಿನ್ನ ಚರಿತೆ । ಪಣವ ಮಾಡುವ ನಾರು ನಿನ್ನ ಸಂಗಡ ಹೊ ಹೊ । ತೃಣ ಸಮವಾಗಿದೆ ತ್ರಿಭುವನಾ । ಸನಕಾದಿ ವಂದಿತಾ ವಿಜಯ ವಿಠ್ಠಲರೇಯಾ । ಮಣಿದು ನಮೋ ಎಂಬೆ ಉದ್ಧರಿಸು ಊರ್ಜಿತಾ ॥

ಅಟ್ಟತಾಳ

ಕೃತ ವೀರ್ಯ ಸೂನು ಅರ್ಜುನನ ಸಾವಿರ ಹಸ್ತಾ । ಕ್ಷಿತಿ ಗುರುಳಿಸಿ ಅವನನ್ನು ಕೊಂದು ಅವನ । ಸಂತರನ ಸದದು ಕಾಳಗದೊಳು ಏಕ ವಿಂ । ಶತ ಸಾರಿ ಗೆಲಿಸಿ ಕ್ಷತ್ರಿಯರ ಹತ ಮಾಡಿ । ಕೃತು ಮಾಡಿ ಅವನಿ ಸುರರಿಗೆ ಸಕಲ ದಾನಾ । ಚತುರ್ದಿಗ್ಭಾಗವ ಕೊಟ್ಟು ಸಿಂಹ ಪ । ರ್ವತದಲ್ಲಿ ಇದ್ದ ಬ್ರಾಹ್ಮರನ ಮನ್ನಿಸಿ ವಾರಿ । ಪತಿಯಿಂದ ಭೂಮಿಯ ಪಡೆದು ರಾಮ ಭೋಜ । ಕ್ಷಿತಿಪನ್ನ ಪೊಂದಿಸಿ ಯಾಗವ ಮಾಡಿಸಿ । ಕೃತ ಕಾರ್ಯ ನೀನಾದೆ ಪಡುವಲ ವನಧಿಲಿ । ನುತಿಸಿದವರ ಪ್ರಾಣಾ ವಿಜಯ ವಿಠ್ಠಲರೇಯಾ । ಪ್ರತಿಕೂಲ ಕಳೆವ ವಾಗಿಂದ್ರಿಯ ನಿವಾಸಾ ॥4॥

ಅದಿತಾಳ

ಪರಶುರಾಮನೆಂದು ಸ್ಮರಿಸಿದ ಜನರಿಗೆ । ಸ್ಪರಿಸ ಮಾಡದು ಕಾಣೊ ನಿರಸವಾಗೊದು ನಿತ್ಯ । ಹರುಷದಿಂದಲಿ ಸಂಚರಿಸುವ ಪುಣ್ಯ ಭೂಮಿ । ಪುರುಷಾರ್ಥವಾಗುವದು ವರುಷವರುಷಜ್ಞಾನ । ವರುಷ ಸುರಿವದೂ ಪರುಶವಾಗಿಪ್ಪನು । ಅರಸಿನ ಸಹಿತ ಬಂದು ಅರಸಿದರೆ ದೊರಕನು । ಸುರ ಶಿರೋಮಣಿ ಪತಿಕರಿಸುವ ತಾನೆ । ಉದ್ಧರಿಸುವ ಕರುಣದಿಂದ ಪುರುಷ । ಪ್ರಧಾನ ಜನಕ ವಿಜಯ ವಿಠಲರೇಯಾ । ಸರಸಿಜ ಭವಾದ್ಯರಿಗೆ ಅರಸಾಗಿ ಪೊಪ್ಪುತಿಹಾ ॥5॥

ಜತೆ

ಭಾವಿ ಸಪ್ತ ಋಷಿಯ ಭಕ್ತ ವತ್ಸಲ ಕರು । ಣಾವ ಲೋಕನ ರಾಮಾ ವಿಜಯ ವಿಠಲ ಮುಖ್ಯ ॥6॥



## ಸುಳಾದಿ 40

## ಶ್ರೀ ಕಪಿಲ ದೇವರ ಸ್ತೋತ್ರ

ರಾಗ ಭೈರವಿ ಧ್ರುವತಾಳ

ಉಪಜೀವ್ಯ ನಿಜಾನಂದ ಉದಧಿಶಯನ ಸರ್ವೇಶ। ಸಪುತ ಸಪುತ ಲೋಕಪಾಲ ಪಾಲಕ ಕಾಮೇಶ । ಉಪಜೀವ್ಯ ತಪೋಧನಪಾನಿಷ್ಟ ಪ ಪಾವನ ಪಾವಕ । ಜಪ ಶೀಲ ಸಿದ್ಧ ಮೂರ್ತಿ ಸಾಕಾರ ಸರ್ವಾಕಾರ । ಉಪದೇಶವ ತುಂಬರಾದಿ ನಾರದ ವಂದಿತ ಪಾದಾ । ನುಪೊಮೇಯ ರಮೇಯರಸಯೋಗಿ ಜಟಿವಲ್ಕಲವಾಸಾ। ತ್ರಪುತ ತ್ರಿಗುಣಾತೀತ ತ್ರಿಕಾಲ ಕಾಲನಾಮಕ । ವಿಪುಲ ಮಧ್ಯಯೊಗ ಶಾಸ್ತ್ರ ರಚನೆ ಗೈಸಿದ ಗತಿ ಪ್ರದ ಕುಪಿತ ರಹಿತ ನಿರುತ ಅಪಾರ ಅನಾದಿ ಅಪ್ರತಿಹತ ದೇವ । ಚಪಲ ನಯನ ಅಪರಿಚ್ಛಿನ್ನ ವ್ಯಾಪ್ತ ಬೊಮ್ಮಾಂಡ ಕಾರಣ । ಉಪಜೀವ್ಯ ತ್ರಿಕೋಟಿ ಕಪಿಗಳಯ್ಯಾ ಕನಕವರ್ಣ । ಕಪಿಲ ವೃಷಾಕಪಿಪತಿ ಅಪರ ಬುದ್ಧನು ನೋಡು ಎನ್ನ ಪರಾಧ ಕ್ಷಮೆ ಮಾಡಯ್ಯಾ । ಕೃಪಣ ವತ್ಸಲ ಉಪಹತಿಗಳನು ಕೆಡಿಸಯ್ಯಾ । ಉಪಜೀವ್ಯ ದಿಪುತ ವಿಜಯ ವಿಠ್ಠಲ ಕಪಿಲಾವತಾರ ಲಾವಣ್ಯಾ ॥1॥

ಮಟ್ಟತಾಳ

ಪದ್ಮ ಸಂಭವ ತನ್ನ (ಸಂಜಾತನ್ನ) ಛಾಯದಿಂದಲಿ ಪುಟ್ಟಿದ । ಕರ್ದಮ ಮುನಿ ದೇವಹೂತಿಯಲ್ಲಿ ಬಂದು । ಉದ್ಭವವಾದ ಶುಕ್ಲ ಶೋಣಿತ ರಹಿತ । ಈದ್ಧರೆರೊಳಗೆ ನಿನ್ನ ನಂಬಿದ ಮಾನವಗೆ । ಹೃದ್ರೋಗವೇ ಇಲ್ಲ ಸುಹೃತ ಸುಪ್ರಭ ಪ್ರಭಾ ಮೂರುತಿ । ವಿಜಯ ವಿಠ್ಠಲ ಕಪಿಲಾತ್ಮಕ । ಉದ್ಧರಿಸು ಎನ್ನ ಮನದೊಳಗೆ ನಿಂದು ॥2॥

ತ್ರಿವಿಡಿ ತಾಳ

ಮುನಿವರೇಣ್ಯ ಸ್ವಾಮಿ ಸ್ವತಂತ್ರ ಕರ್ತ ಸ । ಜ್ಜನ ಮನೋಭೀಷ್ಟ ಭಯನಾಶ ಶಕ್ತ । ಜನನಿಗೆ ಜ್ಞಾನೋಪದೇಶವ ಪೇಳಿ ಸಾ । ಧನ ಮಾರ್ಗ ತೋರಿ ಸಂಸಾರವೆಂಬೋ । ವನಧಿಯ ದಾಟಿಸಿ ಸ್ನೇಹ ಭಾವದಿಂದ । ನಿನಗೆ ನೀನೆ ಪೊಳೆದ ಭಕುತವಶನೇ ವನಜ ಭವಾದಿಗಳು ನಿನ್ನ ಲೀಲೆಯ ನೋಡಿ । ಗುಣಿಸಿ ಎಣಿಸಿ ಮೈಮರದರದಕೋ । ಎಣೆಗಾಣೆನೋ ಸ್ವೇಚ್ಛಾ ಕ್ರೀಡಿಗೆ ಮಂಗಳ ಖಣಿಯೆ ತುಳಸೀ ಪ್ರಿಯ ಅತುಳ ಕೀರ್ತಿ । ಪ್ರಣವ ಮೂರುತಿ ನಮ್ಮ ವಿಜಯ ವಿಠ್ಠಲರೇಯಾ । ಮಣಿದು ನಮೋ ಎಂಬೆ ಸಾರ ಹೃದಯ ಬದ್ಧ ॥3॥

### ಅಟ್ಟತಾಳ

ಆದಿ ಮನುವಿನ ಕಾಲದಲ್ಲಿ ಪುಟ್ಟಿ। ಭೇದಾರ್ಥ ಜ್ಞಾನವ ಶಿಷ್ಯರಿಗೆ ಪೇಳಿ। ವೇದ ವೇದಾಂತವ ತಿಳುಪಿ ಅಜ್ಞಾನವ। ಛೇದಿಸಿ ಬಿಟ್ಟ ಬಿಸಿಜ ದಳಾಂಬಕ। ಸಾಧು ಸಾಧು ಸಚ್ಚಿದಾನಂದಾತ್ಮಾ ಎ। ನೋದ ಮನುಜ ಕಾಯ ನಾರಾಯಣ ವರ। ಬೋಧ ಮುದ್ರಹಸ್ತ ಶಶಿವರ್ಣ ಸಂಕಾಶ। ಆದಿತ್ಯವಂದಿತ ವಿಜಯ ವಿಠ್ಠಲರೇಯಾ। ವೈಧಾತ್ರ (ವೈದಾತ್ಯ) ಸೇವ್ಯ ನಿರಾಕುಲ ಕಪಿಲಾ ॥4॥

### ಆದಿತಾಳ

ಅರುಣೋದಯಲೆದ್ದು ಕರಣ ಶುದ್ಧಿಯಿಂದ। ಗುರು ಕಪಿಲ ಕಪಿಲನೆಂದು ಸ್ಮರಿಸಿದ ಮಾನವಗೆ। ನಿರುತ ಮಾಡಿದ ಮಹತ್ತರ ಕರ್ಮಬಂಧ। ಪರಿಹರವಾಗಿ ಪೋಗುವದು ಪರಮ ಜ್ಞಾನಿಯಾಹ। ಪರಿಮಾಣಕ್ಕೆ ತನ್ನ ಕುರುಹು। ತೋರಿಸಿ ಯಮನ ಬಾಧೆ ತಪ್ಪಿಸುವನು। ನಿರಯವಿದುರ ಮನುಪೌತ್ರ (ಮಾನುಷ ಗಾತ್ರ ) ವಿಜಯ ವಿಠ್ಠಲ। ಪೊರೆವ ಪ್ರಪನ್ನ ಜನರ ಹೃದಯದೊಳಗೆ ನಿಂದು ॥5॥

### ಜತೆ

ಕಪಿಲ ಕಪಿಲ ದೇವ ದೇಶಕಾಲತ ಪೂರ್ಣ। ದ್ರುಪದ ನಂದನಿ ವರದ ವಿಜಯ ವಿಠ್ಠಲ ಮೂರ್ತಿ ॥6॥



# ತತ್ವಾಭಿಮಾನಿ ದೇವತೆಗಳ ಪ್ರಾರ್ಥನೆ

## ಸುಳಾದಿ 41

### ಧ್ರುವತಾಳ

ನಮೋ ನಮೋ ಸಮಸ್ತ ತತ್ವಾಭಿಮಾನಿಗಳಿರಾ । ನಿಮಗೆ ಹಸ್ತವ ಮುಗಿದು ಕೊಂಡಾಡುವೆ । ಕ್ರಮದಿಂದ ಬಿನ್ನಪವ ಲಾಲಿಸಿ ಕೇಳುವದು । ಅಮರ ಮ್ನಗ ಮಜ್ಜನಗೋಸುಗ । ಅಮಲಮತಿಯನಿತ್ತು ಜ್ಞಾನ ಭಕ್ತಿಯಿಂದ ರಮೆಯರಸನ್ನ ನೋಳ್ಪಸಾಧನ ತೋರಿ । ಗಮನಾದಿ ಮೊದಲಾದ ವ್ಯಾಪಾರ ನಿಮ್ಮಾಧೀನ । ಶ್ರಮಸಾಧ್ಯವಾಗದಂತೆ ಪೈಣವಿತ್ತು। ತಮೋ ರಜ ಗುಣದವರ ಬಾಧಿಯ ತಪ್ಪಿಸಿ ಉ । ತ್ತಮ ಯಾತ್ರಿಯ ಮಾಡಿಸುವದು ತ್ರಯ ಕ್ಷೇತ್ರದ। ಕುಮತ ಪೊಂದಿದ ನಿತ್ಯ ಕುಮತಿ ಜನರ ಸಂಗ। ನಿಮಿಷವಾದರೆ ಕೊಡದೆ ಪಾಲಿಸಬೇಕು। ಯಮ ನೇಮ ಮಿಗಿಲಾದ ಸತ್ಕರ್ಮಾಚಾರದಿಂದ । ಸಮಚಿತ್ತ ಭೇದದಿಂದ ಇರಲಿ ಎನಗೆ । ನಮೊ ನಮೊ ಸಮಸ್ತ ತತ್ವಾಭಿಮಾನಿಗಳಿರಾ। ಕುಮತಿಯ ಬಿಡಿಸುವದು ನಾನೆಂಬೊ ಮಾತಿನಲ್ಲಿ। ಭ್ರಮಣವಲ್ಲದೆ ಲೇಸ ಲೇಸು ಕಾಣೆ। ರಮೆಯರಸ ನಮ್ಮ ವಿಜಯ ವಿಠಲನಂಘ್ರಿ । ಕಮಲ ಹೃತ್ಕಮಲದಲ್ಲಿ ಪೊಳೆವಂತೆ ಕೃಪೆಮಾಡು ॥1॥

### ಮಟ್ಟ ತಾಳ

ತನುವೆನ್ನ ದೆಂಬೆನೆ ತನುವೆನ್ನದಲ್ಲ। ಮನವೆನ್ನ ದೆಂಬೆನೆ ಮನವೆನ್ನದಲ್ಲ।ಧನವೆನ್ನ ದೆಂಬೆನೆ ಧನವೆನ್ನದಲ್ಲ। ಜನವೆನ್ನದೆಂಬೆನೆ ಜನವೆನ್ನದಲ್ಲ। ತನು ಮನ ಧನ ಜನವು ಅನುದಿನದಲಿ ನೋಡೆ। ವನಜ ಭವಾದಿಗಳೆ ಎಣಿಸಿ ಪೇಳುವದೇನು। ಕೊನೆಮೊದಲು ನಿಮ್ಮಾಧೀನವಯ್ಯಾ ಬಿಡದೆ। ಇನಿತು ಪೊಂದಿರಲಿಕ್ಕೆ ಮಣಿದು ಹೇಳುವ ಮಾ। ತಿನ ಉಪಚಾರ್‍ಯಾಕೆ ಘನಮೂರುತಿ ನಮ್ಮ ವಿಜಯ ವಿಠಲನ್ನ ಪ್ರೇರಣೆಯಿಂದಲಿ । ನಿಮ್ಮ ಸಕಲ ಚೇಷ್ಟಪ್ರದವು ॥2॥

### ತ್ರಿವಿಡಿತಾಳ

ಭೀತಿಪ್ರದ ಜೀವಜಡಗಳೆಲ್ಲ ನಿಮ್ಮ। ಚಾತುರ್ಯ ಪ್ರೇರಣೆ ಸಿದ್ಧವಾಗಿರಲಿಕ್ಕೆ । ಭೂತಳದೊಳು ನಾನಾ ಯಾತ್ರಿಚರಿಸುವಾಗ । ಭೀತಿ ಬಡಲ್ಯಾಕೆ ತಾತ್ವಿಕರೆ। ದೈತ್ಯರ ಗಣದಿಂದ ಇಂತಾಗುವದಲ್ಲ। ಪ್ರೀತಿವಂತರು ನೀವು ನಾನನ್ಯನೇ। ಜಾತಕರ್ಮಾರಭ್ಯ ಅಂದಿನ ಪರಿಯಂತ । ಯಾತಕಾಲೋಚನೆ ಸರ್ವರಿರಲು । ಆತುಮದೊಳಗೆ ಸತ್ವ ರಾಜಸ ತಾಮಸ। ಗಾತುರ ಗೋಳಕ ನಿಮ್ಮ ದೇಹ। ಈ ತೆರದಲಿ ಮೂರು ವಿಧವಾಗಿ । ಸಮಸ್ತ ಭೂತಳದೊಳಗೆ ನೀವು ಪೊಂದಿರಲು । ಭೀತಿ ಎನಗೆ ಉಂಟೆ ಎಲ್ಲಿದ್ದರು

ಕೇಳಿ । ಮಾತ್ರ ಕಾಲವಾಗೆ ಬಲುಸೌಖ್ಯವೆ । ಗೋತುರ ತರು ಗುಹ ವನಾರಣ್ಯ ಪೊದೆ ಮಿಕ್ಕ । ಭೀತಿಗಳಿರಲೇನು ನಿಮ್ಮ ಬಲವು । ಸ್ವಾತಂತ್ರ ಪುರುಷ ವಿಜಯ ವಿಠಲರೇಯನ । ದೂತನಾದವನಿಗೆ ಭಯವಿಲ್ಲ ಭಯವಿಲ್ಲ ॥3॥

ಅಟ್ಟತಾಳ

ದೇಶ ಕಾಲ ಕರ್ಮ ಗುಣ ವಿಚಾರಾಚಾರ । ಭಾಷೆ ರೂಪಕ್ರಿಯ ಭೇದವಾದರೇನು । ದೋಷದೂರರೆ ನೀವು ತತ್ತತ್‌ಸ್ಥಾನದಲ್ಲಿ । ವಾಸವಾಗಿದ್ದು ನಂಬಿದ ಜನರ ಮನೋ । ಪಾಸನೆ ಪ್ರಕಾರದಲ್ಲೀಸುತಿರಲಿಕ್ಕೆ । ಏಸು ಬಗೆಯಿಂದ ಚಿಂತಿಸೆ ಸಲ್ಲದು । ಈ ಶರೀರವೇ ನಿಮ್ಮ ಚರಣಕ್ಕೆ ಅರ್ಪಿಸಿ । ದಾಸ ದಾಸನೆಂದು ತಲೆವಾಗಿ ಕೊಂಡಿಪ್ಪೆ । ಲೇಸು ಹೊಲ್ಲೆಗಳೆಲ್ಲ ನೀವಿತ್ತದಹುದು । ದೇಶ ಕಾಲಾದಿಯ ಗೊಡಿವೆ ಎನಗೆ ಯಾಕೆ । ಭಾಸುರ ಕೀರ್ತಿ ಅಪಕೀರ್ತಿ ನಿಮ್ಮದೇ ಸರಿ । ಈಸು ದಿವಸ ನಾನು ಬದುಕಿದಕೆ ಎನ್ನಾಸೆ । ಶಿದ್ಧಿಸಲಿ ಉತ್ತಮರ ಸಂಗತಿಯಿಂದ । ಕೋಶ ಭಂಡಾರಾದಿ ಅಹಿಕ ಬೇಡುವದಿಲ್ಲ । ಸಾಸಿರಕ್ಕೆ ನಿಮ್ಮ ಪ್ರಸಾದವಾಗಲಿ । ಸಾಸಿವಿಕಾಳಷ್ಟು ನಿಮ್ಮ ವಿನಾವಾಗಿ । ದ್ವೇಷದೂಷಣೆ ಸ್ನೇಹ ಮಾಡುವರೆ ಇಲ್ಲಾ । ಲೇಶ ಕಾಲದಿಂದ ಮಹಕಾಲ ಪರ್ಯಂತ । ಈಶನೊಬ್ಬನು ಕಾಣೊ ಸರ್ವರ ಪ್ರೇರಕ । ಕಾಶಿಪುರಾಧೀಶ ವಿಜಯ ವಿಠಲ ಸ । ರ್ವೇಶನ ತೋರಿಸಿ ಕೊಡುವದು ಸರ್ವದಾ ॥4॥

ಅದಿತಾಳ

ಶರಣು ಜಯಂತ ಮಿತ್ರಮನು ಪ್ರಾಣ । ಧರುಣಿ ವರುಣ ಮರುತ ಬಾಂಧವ ವಾಯು ಗಣಪ । ಪಂಚ ಮರುತ ತರಣಿ ದಿಗ್ದೇವ ದಕ್ಷ ಅಶ್ವಿನಿಯರು ಇಂದ್ರ । ಹರಶೇಷ ಗರುಡ ವಾಯು ಬ್ರಹ್ಮ ಲಕುಮಿ ದೇವಿ । ಪರಮ ಕರುಣದಿಂದ ಪ್ರತಿ ಪ್ರತಿ ದಿನದಲ್ಲಿ । ಪೊರೆವುತ್ತ ಬರುವದು ಭಕ್ತಗೆ ಪೊಲಿದು ಎಲ್ಲ । ಚಿರಕಾಲದಲಿ ನಿಮ್ಮ ಸ್ಮರಣೆ ಪಾಲಿಸಿ । ಪುಣ್ಯ ಶರಧಿಯೊಳಿಡುವದು ಹರಿ ಮೆಚ್ಚುವಂತೆ ಎನ್ನ । ಕರಚರಣಾದಿಗಳಲ್ಲಿ ವ್ಯಾಪಾರ ನಿಮ್ಮದು । ಹಿರಿದಾಗಿ ಪೇಳುವದೇನು ತಾತ್ವಿಕ ಜನರೆ । ಮೊರೆ ಹೊಕ್ಕೆ ನಿಮ್ಮ ಪಾದ ಮನೊವಾಚ ಕಾಯದಲಿ । ತ್ವರಿತದಲಿ ಎನ್ನ ಮನೋಭೀಷ್ಟಿಯಾಗಲಿ ಪುರಂದರನುತ ನಮ್ಮ ವಿಜಯ ವಿಠಲರೇಯನ । ಚರಣ ಕಾಣುವ ಯೋಗ ತೋರಿಸಿ ಕೊಡುವದು॥5॥

ಜತೆ

ಜಗತ್ತಿನ ವ್ಯಾಪಾರ ನಿಮ್ಮಿಂದಾಗುವದು ಪ । ನ್ನಗಶಾಯಿ ವಿಜಯ ವಿಠಲನಲ್ಲಿ ಮನವಿರಲಿ ॥9॥

# ವಿಜಯದಾಸರ ಸ್ತೋತ್ರ ಸುಳಾದಿ

## ಸುಳಾದಿ 42

### ಧ್ರುವತಾಳ

ನಿಷ್ಠೆಯಿಂದಲಿ ಮನಮುಟ್ಟಿ ಭಜಿಸು ವಿಜಯ । ವಿಠ್ಠಲದಾಸರ ಮನವೇ ನಿತ್ಯಾ । ಎಷ್ಟು ಪೇಳಲಿ ಯಿವರ ಉತ್ಕೃಷ್ಟ ಮಹಿಮ ಕೃಪಾ ದೃಷ್ಟಿಯಿಂದಲಿ ನೋಡಿದಾಕ್ಷಣದೀ । ಭ್ರಷ್ಟಮನಸಿನಿಂದಾ ಬಿಟ್ಟು ಧರ್ಮಾಚರಣೆ । ದುಷ್ಟಕೃತ್ಯವ ಗೈದ ದೋಷದಿಂದ । ತಟ್ಟಿದ ದುರಿತೌಘ ಮೊಟ್ಟೆಗಳೆಲ್ಲವು । ಸುಟ್ಟು ಭಸ್ಮೀಭೂತವಾದ ಬಳಿಕ । ಪುಟ್ಟಿ ಸುಜ್ಞಾನ ಭಕ್ತಿ ವೈರಾಗ್ಯ ಭರಿತರಾಗಿ । ಮೆಟ್ಟುವರೋ ಕೈವಲ್ಯ ಪಥವಾ । ಸೃಷ್ಟಿ ಸಂಹಾರ ಕರ್ತರಿದ್ದಲ್ಲಿ ಪೋಗಿ । ಸಿಟ್ಟಿನಿಂದಲಿ ಕೊಟ್ಟು ಶಾಪವನ್ನು । ಥಟ್ಟನೆ ವೈಕುಂಠ ಪಟ್ಟಣಕ್ಕೆ ತೆರಳಿ । ಪಟ್ಟದರಸಿಯಾದ ಲಕುಮಿ ಸಹಿತ । ಸೃಷ್ಟಾಂಡ ಭಾರ ಶಿರದಿ ಇಟ್ಟಂಥ ಫಣಿಪತಿಯಾ । ಪಟ್ಟಿಪರ್ಯಂಕದಲ್ಲಿ ಪವಡಿಸಿಪ್ಪಾ । ಧಿಟ್ಟ ಮೂರುತಿ ಶ್ಯಾಮಸುಂದರ ವಿಠ್ಠಲಗೆ । ಪೆಟ್ಟು ಹಾಕಿದ ಪರಮಗಟ್ಟಿಗರಿವರು ॥1॥

### ಮಟ್ಟ ತಾಳ

ಎರಡನೆ ಯುಗದಲ್ಲಿ ಸುರಲೀಲನು ಯೆಂಬ । ತರುಚರ ರೂಪದಲಿ ತರಣಿ ಕುಲೋದ್ಭವನಾ । ಚರಣವ ಸೇವಿಸಿ ಕರುಣ ಸಂಪಾದಿಸಿದಾ । ಮರಳಿ ನಿಕಂಪಾ ನಾಮದಲಿ ದ್ವಾಪರದಲಿ ಪುಟ್ಟಿ ಯಾದವನೆನಿಸಿದ । ಅರುಹಲೇನು ಮತ್ತೆ ಚರಣಜ ಕುಲದಲ್ಲಿ । ಧರಿಸುತ ಜನ್ಮವನು ಸಿರಿಶ್ಯಾಮ ಸುಂದರ ವಿಠಲನಂಘ್ರಿಗೆ । ಶರಧನುವಿಗೆ ಹೂಡಿ ಗುರಿ ನೋಡಿ ಎಸೆದಾ ॥2॥

### ತ್ರಿವಿಡಿತಾಳ

ಪುನಃ ಕಲಿಯುಗದಲ್ಲಿ ಅನುಪಮ ಸನ್ಮಹಿಮ । ಅನಿಮಿಷ ನಾಥಾಖ್ಯ ದಾಸಾರ್ಯರಾ । ಮನೆಯಲ್ಲಿ ಗೋವತ್ಸವೆನಿಸಿ ವಾಸಿಸಿ ಹರಿಯ ಗುಣನಾಮ ಕೀರ್ತನೆ ಶ್ರವಣಗೈದ । ಘನ ಪುಣ್ಯದಿಂ ಪಶುತನುವು ಪೋಗಾಡುತ್ತ । ತನಯರಾಗಿ ಆವರ ಬಳಿಯಲಿದ್ದು । ಮುನಿಮಧ್ವಪತಿ ಯಂಬೊ ಪೆಸರಿನಿಂದಲಿ ಸದಾ । ಮಿನುಗುವರೊಡಗೂಡಿ ಕವನದಿಂದಾ। ಅನನುತ ಶ್ರೀಶ್ಯಾಮಸುಂದರ ವಿಠಲನ್ನ । ಮನದಿ ಕೊಂಡಾಡುತ್ತ ಅನುಗ್ರಹ ಪಡೆದರು॥3॥

ಅಟ್ಟ ತಾಳ

ಕ್ಷಿತಿಯೊಳು ಮಾನವಿ ಸೀಮೆಗೆ ಸೇರಿದ । ಕ್ಷಿತಿಧರ ದೇವನ ಸುತೆಯ ಸುತೀರದಿ । ಕ್ಷಿತಿರುಹ ವರನರಹರಿಯ ಸಾನಿಧ್ಯದಿ । ಅತಿಪುಣ್ಯ ಕರಪುಟ್ಟ ಬದರಿ ಸುಕ್ಷೇತ್ರದಿ । ಸತಿ ಶಿರೋಮಣಿಯಾದ ಕೂಸಮ್ಮನುದರದಿ । ಸುತನಾಗಿ ಪ್ರತಿದಿನ ಶಶಿಯಂತೆ ಬೆಳೆಯುತ್ತ । ಅತಿಶಯ ದಾರಿದ್ರ್ಯ ವ್ಯಥೆಯು ಅವರಿಸಲು । ಖತಿಲೇಶವಾಗದೆ ಸಹಿಸುತ್ತ ಶಾಂತದಿ । ಮತಿಯಿಂದ ಮನದೋಳು ಯೋಚಿಸಿ ಮುಂದಣ ಗತಿಗಾಗಿ ತಾ ಪೋಗಿ ವಾರಣಾಸಿಯುಲ್ಲಿ । ಪತಿತರುದ್ಧರಿಸುವ ಸುರನದಿಯುಲಿ ಮಿಂದು । ಶಿತ ಮನದವರಾಗಿರುತಿರಲೊಂದಿನ । ಸ್ತುತಿಸುತ್ತ ಹರಿಪಾದ ಮಲಗಿರೆ ಸ್ವಪ್ನದಿ । ಶತಧೃತಿ ನಂದನ ಕರೆದೊಯ್ದಾಚೆಗೆ ಇಪ್ಪ । ಕೃತಭುಜ ತತಿಯಿಂದ ನುತನಾದ ಶ್ರೀ ಶುಕ । ಪಿತನಂಘ್ರಿ ಕಮಲಕ್ಕ ನುತಿಸಿ ಬಿನ್ನೈಸಿದಾ । ಹಿತದ ಸಹೋದರ ಇವನ ರಕ್ಷಿಸೆನೆ । ಶೃತಿಗೆ ಸಮ್ಮತ ಮಧ್ವಮತದ ರಹಸ್ಯದ । ಕೃತಿಗಳ ರಚಿಸಿ ಪ್ರಾಕೃತ ಸುಭಾಷೆಯಲಿ । ಸತತ ಶ್ರವಣದಿಂದಾ ಮತಿಮಂದ ಜನರು ವು । ಧ್ರುತರಾಗುವಂದದಿ ಕಥೆಸುತಗರೆದ ನಂ । ಕಿತವನು ಕೃಪೆಯಿಂದಾ ಯತಿಗಳ ಮನೋಹರ । ಕೃತಿದೇವಿ ಪತಿ ಶ್ಯಾಮಸುಂದರ ವಿಠಲಾ ॥4॥

ಆದಿತಾಳ

ಮೌನಿಸನ್ಮಾನಿಸು ಜ್ಞಾನಿವರ್ಯರಾದ ಇವರ ಅ । ಮಾನುಷ ಕೃತಿಗಳು ಭಾನುವಿನ ಕಿರಣದಂತೆ । ಕ್ಷೋಣಿಯಲ್ಲಿ ತುಂಬಿರಲು ಹೀನಮತಿ ಮನುಜನಾದ । ನಾನೆಂತು ಪೇಳ್ವೆನಯ್ಯ ನೀನೆವೆ ಗತಿಯೆಂದು । ಮೊರೆ ಹೊಕ್ಕ ದೀನರಿಗೆ ಸಾನುರಾಗದಿಂದ ವಲಿದು ಪ್ರಾಣವನ್ನು ಜ್ಞಾನವನ್ನು ದಾನವನ್ನು ಮಾಡಿದರು । ವೇಣು ಧೇನುಪಾಲ ತುರಗಾನನ ಮೋಹನ । ಜಾಣ ಜಗನ್ನಾಥ ದಾಸ ಶ್ರೇಣಿಯ ಸಾಕ್ಷಿ ಕೇಳು । ಈ ನುಡಿ ನಿಜವೆಂದು ಮಾನಸದೊಳಗನುಮಾನವಿಲ್ಲದೆ ಸದಾ । ಮಾಣದೆ ಇವರ ಪಾದಧ್ಯಾನಿಪರಿಗೆ ಪವ । ಮಾನ ಜನಕ ಶ್ಯಾಮಸುಂದರ ವಿಠ್ಠಲನು । ಪಾಣಿ ಪಿಡಿದು ಪರಿಪಾಲಿಸುವಸತತಾ॥5॥

ಜತೆ

ಚಿಪ್ಪ ಶೈಲದೊಳಿಪ್ಪಾ ಅಪ್ಪನ್ನ ಭಜಿಪರಾ । ತಪ್ಪು ಮನ್ನಿಸಿ ಕಾಯ್ವಾ ಶ್ಯಾಮಸುಂದರ ವಿಠಲಾ ॥9॥

★★★

# 43. ಹರಿದಾಸನಾಗುವ ಸುಳಾದಿ

ರಾಗ- ಕಾಂಬೋದಿ -ಧ್ರುವತಾಳ

ದಾಸನಾಗುವದು ಅಶೇಷ ಜನ್ಮದ ಪುಣ್ಯ । ರಾಶಿಬಾರದಲೆ ಫಲಿಸೊದೇನೋ । ಸಾಸಿರ ಕೋಟಿ ಧನತಾ ಸೂರೆ ಬಿಟ್ಟರು । ಕಾಶಿರಾಮೇಶ್ವರ ತಿರುಗಿದರು । ಮಾಸ ಮಾಸ ಉಪವಾಸವನ್ನೇ ಮಾಡಿ । ದೇಶ ಪ್ರದೇಶವನ್ನು ಸುತ್ತಿದರೂ । ವಾಸರೋಸರ ಬಿಡದೆ ಶರೀರ ದಂಡಿಸಿ । ಘಾಸಿಯಾಗಿ ಪಲ್ಲುಗರಿದರೇನು । ವಾಸುದೇವನ ಪಾದಸೇವೆ ದೊರೆಯದು । ಸಾಸಿವಿಕಾಳಿನಿತು ಸಂಶಯ ಯಾಕೋ । ಸಾಸಿರಾಚೆರ್ಚಿಸೆ ನಾಮ ವಿಜಯವಿಠಲನ್ನ । ದಾಸನಾಗುವ ಭಾಗ್ಯ ವಾಸುಕಿ ಎಣಿಸುವನು ॥1॥

ಮಟ್ಟತಾಳ

ಅಂದಣವನು ಏರಿ ಅರಸು ಎನಿಸಿಕೊಂಡು । ಹಿಂದೆ ಮುಂದೆ ಹಿತದ ಪರಿವಾರದವರ । ಸಂದಣಿ ಸಹಿತದಲಿ ಮೆರೆದು । ಕುಂದದೋಲಗವನ್ನು ಕುಶಲದಿಕೊಳಬಹುದು । ಇಂದು ಮೋಹನ ಗುರು ವಿಜಯವಿಠಲ । ಎಂದಿಗೆಂದಿಗೆ ಭಕುತಿ ಈಯನೋ ಪರೀಕ್ಷಿಸದೆ ॥2॥

ತ್ರಿವಿಡಿತಾಳ

ಷಡುರಸನ್ನವ ಕೊಡುವ ಒಡವಿ ವಸ್ತು ಒಳ್ಳೇ । ಉಡಗಿ ವಸನಾಭರಣ ತಡಿಯದೆ ಕೊಡುವ । ಮಡದಿ ಮಕ್ಕಳು ತನ್ನ ಒಡನೊಡನೆ ಬಂದು ಸುಖಪಡುವ ಬಾಂಧವರನ್ನು ಎಡೆಬಿಡದಲೆ ಕೊಡುವ । ಅಡಿತೊಲಗದಲೆ ಅನೇಕ ಕಡಿಯಲಿಂದ । ಕಡೆಯಿಲ್ಲದ ಭಾಗ್ಯಸಡಲಾದಂತೀವ । ಕಡು ಮುದ್ದು ಚತುರ್ಭಾವ ವಿಜಯವಿಠಲರಂಗ । ದೃಡಭಕುತಿ ಕೊಡನಯ್ಯಾ ಅಡಿಮೇಲಗಳಲಿದರು ॥3॥

ಅಟ್ಟತಾಳ

ದಾಸನಾಗುವೆನೆಂದು ಆಶೆಯ ಮಾಡಲು ಕ್ಲೇಶವ ಬಡಿಸುವ ।ನಾಶನ ಮಾಡಿಸುವ ಸಕಲ ಐಶ್ವರ್ಯವ । ಗ್ರಾಸವಾಸಕೆ ತರಲೀಸಾನು ಪರರಿಂದ । ದ್ವೇಷವ ಮಾಡಿಸುವ ಮಾನಿಸರ ಕೈಯಿಂದ । ಮೋಸವಾದ ಭವಪಾಶದಲ್ಲಿ ಬಿಗಿವ । ಬೀಸಿ ಬೀಸಾಟುವ

ಕಾಸಿನವನ ಮಾಡಿ। ಲೇಸು ಜೋತಿಸೆ ನಾಮ ವಿಜಯವಿಠಲನ್ನ। ದಾಸನಾಗುವನಿಗೆ ಕ್ಲೇಶ ಬಡಿಸದೆ ವೊಲಿಯನು ॥4॥

### ಆದಿತಾಳ

ಏನು ಹೀನಹಾನಿ ಬರಲು ತಾನಳುಕಿ ಹಿಂದಾಗದಲೆ। ನೀನು ನೀನು ನಿನ್ನದೆಂದು ಮಾನಸ್ಥಾನ ಮೌನಧ್ಯಾನ ಜ್ಞಾನ। ನಾನೀಗ ನಿನ್ನವನೆ ಎಂದು ಮನಾನಂದ ನಾ। ಪ್ರಾಣ ದಿಟ್ಟ ತ್ರಾಣನಾಗಿ ನೀನೆ ನೀನೆ ಎಂದು ಆನಿಗಾನೆ ಪೊಸದಾಡಿ ಏನು ವಿಪರೀತದನ್ನ। ನಾನೆ ನಿನ್ನ ಬಿಡನೆಂಬೊ ಜಾಣತವೊಂದಿರಲಿ। ತ್ರಾಣಗೆಡನೆಂದು ಪ್ರಮಾಣನಾಮ ವಿಜಯ ವಿಠಲ ಗೇಣುದರ ಪೋಗದಲ್ಲೆ ಪ್ರಾಣಪದಕವಾಗಿಪ್ಪ ॥5॥

### ಜತೆ

ಶ್ರಮವೇನು ಬಂದರೆ ಬಿಡೆ ನೆಂಬೊ ದಾಸಗೆ।
ಯಮನಾಮ ವಿಜಯ ವಿಠಲನು ತೆತ್ತಿಗನೋ ॥6॥



# ಶ್ರೀವಿಜಯದಾಸರ ಸುಳಾದಿಗಳ ಜತೆಗಳು

## ಸಾಧನಭಾಗ-1

1 ॥ ಸಂತತಕ್ರೂರನಕೊಂದು ನಿನ್ನ ನಾಮ ।
ಅಂತೆಕಾಲಕೆನೀಯೋ ಶಾಂತ ವಿಜಯವಿಠಲ ॥

2 ॥ ಬಾಹಿರಶೂನ್ಯನಾಗಿ ಚರಿಸು ಅಂತರದಲ್ಲಿ ।
ಮಹದೈವ ವಿಜಯವಿಠಲನ್ನ ಪಾದವೆಕಾಣು ॥

3 ॥ ಪರಮಮುಖ್ಯಾಮುಖ್ಯ ಅಮುಖ್ಯ ಮಂತ್ರಗಳ ।
ಕರಣಶುದ್ಧಿಲಿ ಮಾಡು ವಿಜಯವಿಠಲನೊಲಿವ ॥

4 ॥ದ್ವಾದಶಮೂಲಮಂತ್ರದಲ್ಲಿ ಸಾಧಿಸಿಮನ ।
ಸಾಧುವೆ ವಿಜಯ ವಿಠಲನ ಪಾದವೆ ಕಾಣೊ ॥

5 ॥ಒಂದೊಂದು ಮಣಿಯಲ್ಲಿ ಒಂದೊಂದು ಭಗವದ್ರೂಪ ।
ಪೊಂದಿವೆ ಭಜಿಸೋದು ವಿಜಯ ವಿಠಲನ ಮಂತ್ರಾ ॥

॥ ಕೊಡಬ್ಯಾಡ ಕೊಳಬ್ಯಾಡ ಸಿರಿವಿಜಯವಿಠ್ಠಲನ್ನ ।
ಅಡಿಗಳರ್ಧಾನಿಮಿಷನಂಬಲು ಕೈವಲ್ಯ ॥

॥ಶ್ರಮವೇನು ಬಂದರೆ ಬಿಡನೆಂಬೊ ದಾಸಗೆ ।
ಯಮನಾಮ ವಿಜಯವಿಠಲನು ತೆತ್ತಿಗನೋ ॥

॥ ಧೋರೆ ಎಂದರೆ ನಮ್ಮ ಸಿರಿ ಅರಸನೆಧೊರೆ ।
ದೊರಕುವಂತೆ ಭಜಿಸಿ ವಿಜಯವಿಠ್ಠಲನಪಾದ ॥

॥ಕ್ಷಣ ಒಂದು ಬದುಕಿದರೆ ನಿನ್ನ ದಾಸ ನೆನಿಸಿ ।
ತನುವಧರಿಸುವೆನು ಭರ್ಗವಿಜಯವಿಠಲ ॥

॥ ಫಣಿಶಾಯಿಸರ್ವದಹೊಣೆಯಾಗಿರಲಿಕ್ಕೆ ॥
ತೊಡು ತೊಡು ತೊಡು ವಿಜಯ ವಿಠ್ಠಲನ ಕವಚವ ॥

॥ ವಿಧಿನಿಷೇಧಗಳೆರಡು ಕರ್ಮಕ್ಕೆ ಪ್ರೇರಕ ।
ವಿಧಿಪಿತವಿಜಯ ವಿಠ್ಠಲನ ನೀನೆಸಾಧನಾ ॥

॥ ತರ್ಕೈಸಿ ಬಿಡದಿಪ್ಪ ವಿಜಯವಿಠ್ಠಲರೇಯನ ।
ಪಕ್ಕೆಯೊಳಗಿರು ನಿನಗಾವ ಭಯವಿಲ್ಲ ॥

॥ನಮ್ರಭೂತನಾಗೆ ಸಂಸಾರ ಪರಿಸುವಾ ।
ಅಮೃತಾಂಶುವೆನಾಮ ವಿಜಯವಿಠ್ಠಲಸ್ವಾಮಿ ॥

॥ ಕಮಲದೊಳು ಕಮಲ ಇದ್ದಂತೆ ಇರು ।
ಹೃ । ತ್ಕಮಲದಲ್ಲಿ ವಿಜಯ ವಿಠ್ಠಲನ ಪೂಜಿಪದು ॥

॥ ಸಂಪತ್ತು ಸ್ಥಿರವಲ್ಲ ಇಹದಲ್ಲಿ ಬಯಸೋದು ।
ಸಂಪೂರ್ಣ ಷಡೈಶ್ವರ್ಯವಿಜಯವಿಠ್ಠಲ ಕೃಷ್ಣ ॥

॥ ಈ ದೇಹದಲಿ ಜ್ಞಾನ ಈ ದೇಹದಲಿಮಾನ ।
ಈ ದೇಹದಲಿ ನಮ್ಮ ವಿಜಯವಿಠ್ಠಲನ ಕಾಣೊ ॥

॥ಕ್ಷೇತ್ರವುಳ್ಳಾಗ ಸಂಪಾದಿಸಿ ಗುರುಕರುಣ ।
ಶತೃ ತಾಪ ವಿಜಯವಿಠ್ಠಲನ್ನ ಬಲಗೊಳ್ಳೊ ॥

॥ ಕರ್ದಮದೊಳಗಿದ್ದ ಮದ್ದಾನೆ ಇದ್ದಂತೆ ।
ಇದ್ದು ಭಜಿಸು ದುರ್ಧರ ವಿಜಯ ವಿಠಲನಂಘ್ರಿ ॥

॥ ಕಾಲ ನಿನ್ನದಲ್ಲ ವ್ಯಾಳಿವ್ಯಾಳಿಗೆ ಸಿರಿ ।
ಲೋಲವಿಜಯ ವಿಠ್ಠಲನ್ನ ಪೂಜಿಸು ಭಕುತಿಲಿ ।

॥ ಸುಖವಿಲ್ಲ ಸುಖವಿಲ್ಲ ಸಂಸಾರವೆಂಬೋದು ।
ಸಖನಾದ ವಿಜಯವಿಠ್ಠಲನ್ನ ನೆನಿಸುಮನವೆ ॥

॥ಮನವೆ ಈಜನುಮ ತಪ್ಪಿದ ಮೇಲೆ ಆವಸಾ-।
ಧನವು ನಿಶ್ಚಯವಿಲ್ಲ ವಿಜಯ ವಿಠ್ಠಲನಕಾಣೋ ॥

ಪರಮಿತ್ರೇತಿ ಸ್ವಸ್ತಯೇ ಪರಿಪೂರ್ಣಾಯ ಕಾಮಾಯ ।
ಹಿರಣ್ಯ ಗರ್ಭನಾಮಾ ವಿಜಯ ವಿಠಲಧೊರಿಯೆ ॥

॥ ನಾಮದಿಂದ ಗತಿ ಮಿಕ್ಕಾದದರಿಂದಿಲ್ಲ ।
ರಾಮನಾಮನೆನಿಯೋ ವಿಜಯವಿಠಲರೇಯನ ॥

॥ ಭಕ್ತಿಲಿ ಕೀರ್ತನೆ ಮಾಡುವಂತೆ ವೊಲಿಯೆ ।
ಮುಕ್ತಿದಾಯಕ ನಮ್ಮ ವಿಜಯವಿಠಲ ವೆಂಕಟ ॥

ನಾಮವೆಸಕಲ ಸಾಧನಕ್ಕೆ ಬಲುಸಾಧನ
ನೀಮರಿಯದಿರು ವಿಜಯ ವಿಠಲನ್ನ ॥

॥ ಎಲ್ಲಿ ನೆನೆದರೆ ಫಲವಿಲ್ಲ ನಿರುತದಲ್ಲಿ ।
ಬಲ್ಲಿದ ವಿಜಯ ವಿಠ್ಠಲನ ನೆನೆಯಲರ್ಥಿ ॥

॥ ಉತ್ತಮರಿಗೆ ನಾನು ಬಲು ನೀಚ ಬಲು ನೀಚ ।
ಚಿತ್ತದೊಡೆಯ ವಿಜಯ ವಿಠ್ಠಲನೆ ಪ್ರೇರಕ ॥

॥ ಸರ್ವಸಾಧನದೊಳಗೆ ನಿನ್ನನಾಮಕೇಸರಿ ।
ಊರ್ವಿಯೊಳಗೆ ಇಲ್ಲ ವಿಜಯವಿಠ್ಠಲ ಧೊರಿಯೆ ॥

॥ ಸಂಸಾರಾಂಬುಧಿಗೆ ನಿನ್ನ ನಾಮವೆ ನಾವಿ ।
ಹಂಸವುಜಯವಿಠ್ಠಲ ನಿನ್ನ ಚರಣವೆಧಡಿ ॥

॥ಜಯಶೀಲವಿಜಯ ವಿಠ್ಠಲನಂಘ್ರಿ ಬಿಡದಿರು ।
ಭಯವೆ ಕಾಣೆಸದಿದಕೊ ಎಲ್ಲಿದ್ದರಾದರು॥

॥ ಹರಿನಾಮದಿಂದಲಿ ಸಂಸಾರ ನಿವೃತ್ತಿ ।
ಸ್ಥಿರವೆಂದವರ ಬಿಡನು ಸುತಪ ವಿಜಯವಿಠ್ಠಲ॥

॥ಭಯಕೃದ್ಭಯನಾಶನ ನೀತನಿಲ್ಲದೆ
ಯಿಲ್ಲ ದೈವ ಮತ್ತೊಂದಿಲ್ಲ ವಿಜಯವಿಠ್ಠಲನ್ನ ॥

॥ ಪವನನ್ನ ಮತವಿಡಿದು ನಿನ್ನ ಶ್ರವಣ ಮಾ
ಡುವರಸಂಗ ಪಾಲಿಸು ನಿತ್ಯವಿಜಯವಿಠ್ಠಲರೇಯಾ ॥

॥ ಅಗ್ರಮತವ ಬಿಟ್ಟು ಅಘ್ನ ವಾಗದಿರಿ ।
ಅಗ್ರಜನಾಮ ವಿಜಯ ವಿಠ್ಠಲನು ಮೆಚ್ಚ ॥

॥ ಪೂರ್ವದವರವಂಶ ಸರ್ವದ್ರೋಹಿಗಳವರು ।
ಸರ್ವವಿದ್ವಾನವೆ ವಿಜಯವಿಠ್ಠಲಗೆ ಸಲ್ಲರೂ ॥

॥ಹರಿ ಸರ್ವೋತ್ತಮನೆಂದು ಅರಿದ ದಾಸರಿಗೆ ನಮಿಸು ।
ವರರುಹ ವಿಜಯ ವಿಠ್ಠಲನು ಒಡನೆ ಇಪ್ಪ॥

॥ ಪ್ರಳಯಾಬ್ಧೀಸುವೆನೆಂಬೊ ಮೂರ್ಖನಗುರುವೆ ।
ಹಲಾಯುಧ ವಿಜಯವಿಠ್ಠಲನೆತ್ತ ನೀನೆತ್ತ॥

॥ ಆರೇನು ಮಾಡುವರು ನಿನ್ನದುಷ್ಕರ್ಮಕ್ಕೆ ।
ಕಾರಣ ತಮಸ್ಸು ಶ್ರೀವಿಜಯವಿಠ್ಠಲ ಕೊಡುವ ॥

॥ ದ್ವಾಸುಪನ್ನ (ರ್ಣ) ವೆಂಬ ವಾಕ್ಯದಲ್ಲಿ ತಿಳಿದು ।
ದಾಸೋಹಂ ದಾಶಾಂಹ್ವಾಃ ವಿಜಯವಿಠ್ಠಲಗೆನ್ನು ॥

॥ಮಿಥ್ಯಾವಾದಿಗೆಸತ್ಯವೆಂದು ಪೇಳಿದರವ ।
ಸತ್ಯವಿಜಯವಿಠ್ಠಲನ್ನ ಭಜಿಸದೆ ಕೆಡುವನು॥

॥ ಘಾಳಿಗೆ ಬೆವರಿಲ್ಲ ನಿನ್ನವಗೆ ಕೇಡಿಲ್ಲ।
ವ್ಯಾಳ ವಿಜಯವಿಠ್ಠಲ ನಿನ್ನ ಬಿಟ್ಟವ ಕೆಟ್ಟ॥

॥ ಘನ ಪೂಜೆ ಇದು ಕಾಣೋ ಆಲೋಚಿಸಿ ನೋಡಿ ।
ಗುಣಾತೀತ ವಿಜಯವಿಠ್ಠಲನ ಪಾದದಲ್ಲಿರು ॥

॥ಆಶೆ ಬಿಡದಮನುಜದಾಸನಾದರೆ ಏನು ।
ಮೀಸಲಗತಿ ಇಲ್ಲ ವಿಜಯವಿಠ್ಠಲ ಬಲ್ಲ॥

॥ ಧನಮನ ತನುಮನೆ ಮಾನಿನಿ ತನುಜರೇನೇನು ।
ಅನಿರ್ವಿಣ್ಣವಿಜಯವಿಠ್ಠಲಗಿತ್ತು ಸುಖಬಡು ॥

॥ ಇದುಬಿಡಿಸದಿರೆ ಎನಗೆಸಾಧನವಿಲ್ಲ ।
ಇದನೆ ಪರಿಹರಿಸೋದೊ ವಿಜಯವಿಠ್ಠಲ ಒಲಿದು ॥

॥ ಬೇಕೇಂಬೋದೆ ಇಲ್ಲ ಲೇಶಮಾತುರಪೇಕ್ಷಾ।
ನೀ ಕೊಟ್ಟರೆ ಇರಲಿ ವಿಜಯವಿಠ್ಠಲರೇಯಾ ॥

॥ಅಣುರೇಣು ಪೊಟ್ಟಿಗೆ ನಡೆಸುವ ದೇವನು ।
ನಿನಗೀಯ ದಿಪ್ಪನೆ ವಿಜಯವಿಠ್ಠಲ ಸ್ವಾಮಿ ॥

॥ ಅತಿಥಿ ಅಭ್ಯಾಗತಿಯ ಸಂತೋಷ ಬಡಿಸಲು ।
ಸತತ ಪೊರೆವ ವಿಜಯವಿಠ್ಠಲಮನಸಿನೊಳು ॥

॥ ಸತ ಜನಹೃದಯ ಕುಮುದವನಧಿ ಬಾಂಧವ ।
ಕೃತನಾಮವಿಜಯ ವಿಠ್ಠಲ ಸರ್ವಾಂತರ್ಯಾಮಿ ॥

॥ ಗರ್ಭೋತ್ಪತ್ತ್ಯಾರಭ್ಯಮರಣ ಪರ್ಯಂತ ।
ಭೂರ್ಭುವ ಸ್ವಸ್ತಿರೆ ವಿಜಯವಿಠ್ಠಲಗೆ ನಮಿಸೋ ॥

॥ ಸೊಲ್ಲು ಎತ್ತಲಿಸಲ್ಲ ಪರನಾರಿಯರ ಕೂಡ ।
ನಿಲ್ಲದು ಸುಕೃತ ವಿಜಯವಿಠಲಮುನಿವ ॥

॥ ದುಷ್ಕರ್ಮ ನೆನೆಸದೆ ದುರಾಗು ಜನನಕ್ಕೆ ।
ಪುಷ್ಕರಾಖ್ಯ ನಾಮ ವಿಜಯವಿಠಲನೊಲಿಸೋ ॥

॥ ಕೋಪದವನ ಸಂಗಡಲಿರೆ ಮಡಿಯಲ್ಲ ।
ಶ್ರೀ ಪತಿ ವಿಜಯವಿಠಲನೊಲಿಯದಿರೆ ಮಡಿಯಲ್ಲ ॥

॥ ಹಕ್ಕಲ ದೈವಗಳ ಹಾದಿಗೆ ಬೇಲಿಬಡದು ।
ರಕ್ಕಸಾಂತಕ ವಿಜಯವಿಠಲನ್ನ ಕೊಂಡಾಡು॥

॥ ಸಂತತನೆಸಗಿದ ಕರ್ಮ ತನ್ನ ಪತಿಯು ಕಾಂತ
ವಿಜಯವಿಠಲಗೀಯದವಳೆ ಹೊಲತಿ॥

॥ ಇದರೊಳು ಕ್ರಮವುಂಟು ವಿಜಯವಿಠಲನ್ನ ।
ಪದಗಳರ್ಚಿಸದವ ಎಂದೆಂದಿಗೂ ನಿಜ ಹೊಲಿಯ ॥

॥ ಆಭಾಸವಾಗಲಿ ಅಡಿಗಡಿಗೆ ಜನರಿಂದ ।
ಲಾಭವೆ ಎನಗದು ವಿಜಯ ವಿಠ್ಠಲನಿಂದ॥

॥ದಂಪತಿಗಳು ಏಕವಾಗಿಪ್ಪುದೆ ಹಬ್ಬ ।
ಶಂಫದಂತೆ ವಿಜಯವಿಠ್ಠಲ ಪೊಳೆವದೆ ಹಬ್ಬ॥

॥ ವೈರಾಗ್ಯವೆಂಬೊಭಾಗ್ಯದಲಿ ಲೋಲ್ಯಾಡಿ ।
ವೀರನಾದವಿಜಯವಿಠ್ಠಲನ್ನನೆನಸೋದು॥

# ಸಾಧನಭಾಗ ಸುಳಾದಿಗಳು ಭಾಗ-2

॥ ಎತ್ತಪೋಗದಲೆ ಸಾರಥಿಯಾಗಿ ಅನುದಿನ ।
ಉತ್ತರವಿಜಯವಿಠ್ಠಲನಲ್ಲಿ ಸೇರುವ ॥ 1

॥ಬಿಡಿಬಿಡು ಕೋಪವಸಾರಿದೆ ಸಾರಿದೆ ।
ಕೊಡುವ ವಿಜಯವಿಠ್ಠಲ ಜ್ಞಾನಭಕುತಿ ಗತಿ॥ 2

॥ ಚಿತ್ತವೆ ಚಿತ್ತೈಸುವಿಜಯ ವಿಠ್ಠಲರೇಯನ ।
ಚಿತ್ತವಿಡಿದು ಬದುಕು ವಿಜಯವಿಠ್ಠಲ ನಿನಗೆ ಪರಮ ಲಾಭ ॥ 3

॥ ಎನ್ನಂಥವಂಚಕದಿಗ್ದೇಶದೊಳಗಿಲ್ಲ ।
ನಿನ್ನಂಥ ಕರುಣೆಯಕಾಣೆ ವಿಜಯ ವಿಠ್ಠಲಾ ॥

॥ಗುಪ್ತದರ್ಶನೆ ಕೊಡೊ ಗುಣಗಣ ನಿಲಯನೆ ।
ಸಪ್ತವಾಹನ ನಮ್ಮ ವಿಜಯವಿಠ್ಠಲನಿರುತ॥

॥ಸಕಲೇಂದ್ರಿಗಳಿರ್‍ಯಾ ಎನ್ನಲ್ಲಿ ಪೊಂದಿಕೊಂಡು।
ಶಕುತನಾಮವಿಜಯವಿಠ್ಠಲನ್ನ ಒಲಿಸೋದು॥

॥ ಬಲ್ಲವಗೆ ವಿದ್ಯಾಬಯಲಾಗಿ ತೋರೋದು ।
ಅಲ್ಲವೆಂಬುದು ಸಲ್ಲ ವಿಜಯವಿಠ್ಠಲ ಬಲ್ಲ ॥

॥ ಹ್ಯಾಗಾದರಿರಲಿ ಶ್ರೀವಿಜಯವಿಠಲನಂಘ್ರಿ ।
ಭೋಗದೊಳಿಟ್ಟವನೆ ಭಕ್ತಿಪಥಕೆ ಯೋಗ್ಯ

॥ ಈ ಪರಿ ಇದ್ದವಂಗೆ ಅನಂತ ಜನುಮಕ್ಕೆ ।
ತಾಪತ್ರಯಗಳಿಲ್ಲ ವಿಜಯವಿಠಲಬಲ್ಲ ॥ 9

॥ಆವಾಗಹರಿಲೀಲೆ ಕೊಂಡಾಡಿದ ಜನರು ।
ದೇವೇಶವಿಜಯವಿಠ್ಠಲನಂತೆ ನಡೆವರೋ॥ 10

॥ ಭಕುತಿಗೆ ಮುಕುತಿಯೊ ಮತ್ತಾವದಕಿಲ್ಲ ।
ಶಕುತವಿಜಯವಿಠ್ಠಲ ಸಂಬಳ ಇಲ್ಲದ ಬಂಟ ॥ 11

॥ಏಕಾಂತ ಉಳ್ಳವರ ಪದಪದ್ಮ ಪಿಡಿದು ।
ಶ್ರೀಕಾಂತ ವಿಜಯವಿಠ್ಠಲನ ಒಲಿಸುವದು॥

॥ ಈ ಪರಿ ಇರಲು ವೈರಾಗ್ಯಾದಿಯ ನಿತ್ತು ।
ಶ್ರೀಪತಿವಿಜಯವಿಠಲನು ಒಡನಾಡುವ ॥

॥ ಹರಿ ಭಕ್ತರ ಒಮ್ಮೆ ನಿಂದೆಮಾಡಿದವ ।
ನರಕವಾಸಿ ಎನ್ನಿ ವಿಜಯವಿಠ್ಠಲ ಒಲಿಯಾ॥

॥ ಲಾಭ ಪೋಗುವದೆಂದು ಪಂಡಿತ ರೆನಿಸುವರು ।
ಲೊಭವೆಗಳಿಸುವರು ವಿಜಯ ವಿಠ್ಠಲ ಒಲಿಯಾ ॥

॥ ಸುಜನಕ್ಕೆ ಕೈ ಮುಗಿದು ನಮಿಸುತಿರುವಾಗ ।
ಕುಜನಕ್ಕಳುಕದಿರು ವಿಜಯವಿಠ್ಠಲ ಒಲಿವಾ॥

॥ ಸಕಲರೊಂದಾಗಿ ಸಂಗ್ರಹವಿಜಯ ವಿಠ್ಠಲನ್ನ ।
ಭಕುತರೆಂದೆನಿಸಿ ವಿಮುಕುತಿಯಲಿ ಸುಖಬಡುವಾ ॥

॥ ಸಕಲದೂಷಕರಿಗೆ ಪ್ರಾಯಶ್ಚಿತ್ತವುಂಟು ।
ನಿಂದಕಗೆ ಇಲ್ಲವು ಕಾಣೊ ವಿಜಯ ವಿಠ್ಠಲ ಬಲ್ಲ ॥

॥ಗರ್ತಿಯಾದವಳಿಗೆ ದುರುಳರ ಭಯವೆನೊ ।
ಅರ್ತಜನರ ಪಾಲ ವಿಜಯವಿಠ್ಠಲ ಮೆಚ್ಚ ॥

॥ ಮುಖ್ಯಧರ್ಮಕಾಣೊ ವಿಜಯ ವಿಠ್ಠಲನ್ನ ।
ಸಖ್ಯನಾಗಿಪ್ಪದು ಇಹಪರ ಲೋಕದಲ್ಲಿ॥

॥ ಶ್ರವಣ ಕೇಳದವನು ಜೀವಚ್ಛವನೆನ್ನಿ ।
ಪವನಸ್ವಾಮಿ ನಮ್ಮ ವಿಜಯವಿಠ್ಠಲಮೆಚ್ಚು ॥

॥ ವಿಪ್ರರ ಪದಧೂಳಿಧರಿಸಿದ ಸುಜನಕ್ಕೆ ।
ಕ್ಷಿಪ್ರಾರೋಗ್ಯಮಸ್ತು ವಿಜಯವಿಠ್ಠಲವಲಿವ ॥

॥ ಜಾರಪತಿಗೆ ಪುಟ್ಟಿದವನು ಶಂಕಿಸುವನು ।
ಶ್ರೀರಮಣ ವಿಜಯವಿಠ್ಠಲನ ಭಕ್ತಿಗೆ ಮೆಚ್ಚು॥

॥ ಭಕುತಿಗೆ ಕೇಡಿಲ್ಲಾ ಅನಂತಕಲ್ಪಕ್ಕೆ ।
ಭಕುತಿಯ ಪಡಿಯಿರೊ ವಿಜಯವಿಠ್ಠಲನಲ್ಲಿ ॥

॥ ಜ್ಞಾನಭಕುತಿ ವೈರಾಗ್ಯ ಭಾಗ್ಯವನು ನೀನು ಪಡಿಯೊ ।
ಮನವೆ ಶ್ರೀನಿಧಿ ವಿಜಯ ವಿಠ್ಠಲನ ದಯದಿಂದ ।

॥ ಯಲುವಿನ ಹೊರೆ ತಂದು ಬದಿಯೊಳಿಟ್ಟಂತೆ ।
ಒಲಿಯಾ ವಿಜಯವಿಠ್ಠಲ ಭಕುತಿಮಾಡದನಕಾ ॥

॥ ಚಿಂತೆ ಮಾಡದಿರು ಚಿತ್ರವಿಚಿತ್ರವು ।
ಕಂತು ಜನಕವಿಜಯ ವಿಠ್ಠಲ ಮಾಡಿದನೆನ್ನು ॥

॥ ಡಿಂಬಾದಂಡಣೆ ಬಿಟ್ಟು ನಂಬು ನಂಬೆಲವೊ ಕಮ
ಲಾಂಬಕ ಸುರೇಶ ವಿಜಯ ವಿಠ್ಠಲನ್ನ ॥

॥ ಕೊಡಲೆ ಭಕುತಿ ಮಾಡಿ ಸಂಸಾರವೆಂಬೊ ವೃಕ್ಷ ।
ಕಡಿದು ಕೆಡಿಸುವದು ಶತ ವಿಜಯವಿಠ್ಠಲಾ ॥

॥ ಗುಣಕರ್ಮಕಾಲದಲಿ ಪರಿಪೂರ್ಣವಾಗಿಪ್ಪ ।
ಗುಣನಿಧಿವಿಜಯವಿಠ್ಠಲನ ಚಿಂತೆಯಗೈಯೊ ॥

॥ ಮಂತ್ರ ತಂತ್ರ ವಾವ ಪರಿಯ ಲರ್ಚಿಸಿದ ಫಲ ।
ಕಾಂತ ಶ್ರೀ ವಿಜಯವಿಠ್ಠಲಗೆ ಸಮರ್ಪಿಸು ॥

॥ ಒಂದರಿತರೆ ಒಂದು ತಿಳಿಯೆ ಭಕ್ತವತ್ಸಲ ।
ತಂದೆ ವಿಜಯವಿಠ್ಠಲ ನಿನ್ನವರೊಳಗಿಡೂ॥

॥ಜತುನ ಕರಗಿದಂತೆ ಕರಗಿ ಪೋಪದು ದೋಷ ।
ಜಿತಕರಣವಿಜಯವಿಠ್ಠಲನು ಬಲ್ಲಿದಕಾಣೊ ॥

॥ನಿನ್ನ ಭಕ್ತರ ಯೋಗ್ಯವ ನೀನೆ ಬಲ್ಲೆ ಕಾಣೊ ।
ಅನ್ಯರು ತಿಳಿಯರು ವಿಜಯವಿಠ್ಠಲರೇಯಾ॥

॥ ನಿನ್ನ ಮನಸು ಬಂದದಲ್ಲದೆ ಜಗದೊಳು ।
ಅನ್ಯಯೋಚನೆಯಿಲ್ಲ ವಿಜಯ ವಿಠ್ಠಲಧೊರಿಯೆ ॥

॥ ಕರ್ಮದಾರಿಯ ಬಿಡು ಕಡೆಬಿದ್ದವರ ಕಾಣೆ ।
ನಿರ್ಮಲಾತ್ಮ ವಿಜಯವಿಠ್ಠಲನ್ನ ತಿಳಿ ತಿಳಿ ॥

॥ ಸ್ವಲ್ಪ ಪೇಳಿದೆ ಇದೆ ಬಿಡದೆ ಚಿಂತಿಸು ಅಹಿ
ತಲ್ಪವಿಜಯವಿಠ್ಠಲ ಗರ್ಪಿಸೆ ಕೈಕೊಂಬಾ ।

॥ಚಿಂತನೆ ಪ್ರಕಾರ ವಿನಿಯೋಗ ಮಾಡು
ಶ್ರೀಕಾಂತ ವಿಜಯ ವಿಠ್ಠಲ ಕೃಷ್ಣಗೆ ಪದಾರ್ಥಗಳ॥

॥ ತೃಪ್ತನಾಗೆಲೊ ಮನುಜಾ ಭುಂಜಿಸಿದ ದೋಷ ನಿ
ರ್ಲಿಪ್ತನಾಗು ವಿಜಯವಿಠ್ಠಲವಿಲಕ್ಷಣನೆಂದು ॥

॥ ಈ ಪರಿಯ ತಿಳಿದು ಯಾಗಮಾಡಿದವರಿಗೆ ।
ತಾಪತ್ರಯಗಳಿಲ್ಲ ವಿಜಯವಿಠ್ಠಲಬಲ್ಲಾ ॥

॥ ಪ್ರಾಣಯಾಗವ ತಿಳಿದು ನಡೆದ ಜನರಿಗೆಲ್ಲ ।
ಪ್ರಾಣವಾಗಿಪ್ಪ ವಿಜಯವಿಠ್ಠಲ ನಿತ್ಯ ॥

॥ ಸತ್ಯಸಂಕಲ್ಪ ನೀನೆ ಮಾಡಿದ ಮರಿಯಾದೆ ।
ನಿತ್ಯ ಅನುಭವಿಪೆನೊವಿಜಯವಿಠ್ಠಲತಂದೆ॥

॥ ಪ್ರೀತಿಯಿಂದಲಿ ಇನಿತು ಸಪ್ತಾನ್ನ ಊಪಾಸ್ತಿ ।
ನೀತಿಯಿಂದಲಿ ಮಾಡೆ ವಿಜಯವಿಠ್ಠಲ ಒಲಿವ ॥

॥ ಅನ್ನದಾನವನು ಮಾಡು ಜ್ಞಾನಪೂರ್ವಕದಿಂದ ।
ಚಿನ್ಮಯವಿಜಯವಿಠ್ಠಲನ್ನ ಮೆಚ್ಚಿಸು ನಿತ್ಯ ॥

॥ ನರಕೋದ್ಧಾರ ಸತ್ಯ ಇದರಿಂದ ಪಿತೃಗಳಿಗೆ ।
ನರಕಾರಾತಿ ನಮ್ಮ ವಿಜಯವಿಠ್ಠಲ ಸುಳಿವ ॥

॥ಎಲ್ಲೆಲ್ಲಿ ಸರಿಬಂದಾ ಬಂದಲ್ಲಿ ನೋಡಿ ಶ್ರೀ
ವಲ್ಲಭವಿಜಯವಿಠ್ಠಲನಾ ನಿರ್ಗುಣದಲ್ಲಿ ॥

॥ ಸಾಧಾರಣ ಅಸಾಧಾರಣ ಹರಿಗೆ ಒಪ್ಪಿಸಿ ಕೊಟ್ಟು ।
ಮೋದಾದಲ್ಲಿರು ವಿಜಯವಿಠ್ಠಲನ್ನ ನೆರೆ ನಂಬಿ ॥

# ಪ್ರಾರ್ಥನಾ ಭಾಗ ಸುಳಾದಿಗಳು

॥ ಭಕುತರ ಭಾಗ್ಯವೇ ಅಪೇಕ್ಷಾ ಪೂರೈಸಿ ।
ಸುಖ ಕೊಡುವದು ಬಿಡದೆ ವಿಜಯವಿಠ್ಠಲ ವೆಂಕಟ ॥

॥ಅಟ್ಟಿದೆ ನಿನ್ನ ನಾಮಗಳಿಂದ ಮಹಾವ್ಯಾಧಿ ।
ವಿಠ್ಠಲಾ ವಿಠ್ಠಲಾ ವಿಜಯವಿಠ್ಠಲ ಕರುಣಿ॥

॥ಬಲವಂತನ ಬಳಿಯಲಿದ್ದ ಮಾನವರ ।
ಕುಲಕೆ ಬಳಲಿಕೆಯಿಲ್ಲ ವಿಜಯವಿಠ್ಠಲರೇಯ॥

॥ಇದರಿಂದ ನಿನಗೆ ನಿನ್ನಾಳಿಗೆ ಬಲುಕೀರ್ತಿ ।
ಒದಗಿ ಬರುತಲಿದೆ ವಿಜಯವಿಠ್ಠಲ ಕಾಯೊ॥

॥ಆರೋಗ್ಯವನೆ ಮಾಡು ಆಲಸ್ಯಗೈಸದೆ ।
ವೈರಾಗ್ಯ ನಿಧಿ ವಿಜಯವಿಠ್ಠಲ ಮಹ ವೈದ್ಯ ॥

॥ ಜತೆ ತಪ್ಪದಂತೆ ಜತನವಮಾಡಿ ನಿಜ ಭಾಗ
ವತರೊಳು ಇಡು ನಮ್ಮ ವಿಜಯ ವಿಠ್ಠಲ ದಕ್ಷ ॥

॥ಉಭಯಾರ್ಥಕ್ಕಿದೆಸ್ತೋತ್ರ ಮಾಡಿ ಅರ್ಪಿಸಿದೆನೊ ।
ಶುಭ ಮೂರುತಿ ನಮ್ಮ ವಿಜಯ ವಿಠ್ಠಲ ಬಾರೊ ॥

॥ ಬಹುದಿನದಲಿ ಇದ್ದ ಭವರೋಗ ಹಿಂಗಿತು ।
ಸಹಿ ವಿಷ್ಣು ವಿಜಯವಿಠ್ಠಲ ವೈದ್ಯನಿಂದಲಿ॥

॥ ಕೋಟಿಗೆ ಇದನೆ ಬೇಡುವೆನಯ್ಯಾಯಮಭಟರ ।
ಕಾಟ ತಪ್ಪಿಸೊ ವಿಜಯವಿಠ್ಠಲ ನಿನ್ನವನು ॥

॥ ಗಿರಿಯಾ ಶಿಖರದ ತುದಿಗೆ ಏರಿದನೊ ನಿನ್ನ ಮೃದು ।
ಕರವತಾರೊ ತಾರೊ ವಿಜಯವಿಠ್ಠಲರೇಯ ॥

॥ಕೀರ್ತಿ ಅಪಕೀರ್ತಿ ನಿನ್ನದು ಕಾಣೊ ದೀಪುತ ।
ಮೂರ್ತಿವಿಜಯವಿಠ್ಠಲ ಎನ್ನಾಳುವಸ್ವಾಮಿ ॥

॥ಹ್ಯಾಗಾದರೇನಯ್ಯಾ ನಿನ್ನಂಘ್ರಿ ಕಮಲಕ್ಕೆ ।
ಬಾಗುವಂತೆ ಮಾಡು ವಿಜಯವಿಠ್ಠಲರೇಯಾ॥

॥ಸ್ತೋತ್ತರ ಮನೋಹರ ದೈತ್ಯಕುಲ ಸಂಹಾರ ।
ಅತ್ರಿ ನಾಮಕ ದೇವಾವಿಜಯವಿಠ್ಠಲದಾತಾ॥

॥ ಎಂದೆಂದಿಗೆ ನಿನ್ನ ಪೊಂದಿದ್ದವನೊ ಪು
ರಂದರಗೊಲಿದಂತೆ ಒಲಿಯೊ ವಿಜಯವಿಠ್ಠಲಾ॥

॥ ವೃಕೋದರನೊಡೆಯಾ, ಉಣಿಸುಸುಧಾರೆಸದೆಡೆಯಾ ।
ಕಾಕೋದರಶಯನ ಶ್ರೀ ವಿಜಯವಿಠ್ಠಲರೇಯಾ ॥

॥ ಅತಂತ್ರನಾನಾಗಿ ನಿನ್ನ ಬಯುಸಿ ಬಂದೆ ।
ಸ್ವಾತಂತ್ರ ಸ್ವಭಾವಕಾಯೊ ವಿಜಯುವಿಠ್ಠಲ ॥

॥ ಮರವೆ ಕೊಡಲಾಗದು ಮರಣಕಾಲಕ್ಕೆ ನಿನ್ನ ।
ಸ್ಮರಣೆ ಚಿತ್ತದಲಿರಲಿ ವಿಜಯ ವಿಠ್ಠಲ ವ್ಯಾಪ್ತ ॥

॥ ನಿನಗಂಜುವನಾರು ಮನಮುಟ್ಟಿದಮ್ಯಾಲೆ ।
ಘನಕೃಪವನಧಿ ಶ್ರೀ ವಿಜಯವಿಠ್ಠಲರೇಯಾ॥

॥ ನೀನೊಲಿದು ಸ್ವತಂತ್ರವಿತ್ತಕಾರಣದಿಂದ ।
ನಾನೆ ಬೇಡಿಕೊಂಡೆ ಚಕ್ರಿವಿಜಯವಿಠ್ಠಲ ॥

॥ ಎಲ್ಲಿದ್ದರೇನಯ್ಯಾ ನಿನ್ನ ಕ್ಲುಪ್ತಿಗೆ ಕಡಿಮೆ ।
ಎಳ್ಳನಿತು ಇಲ್ಲ ವಿಜಯವಿಠ್ಠಲರೇಯ ॥

॥ ರಾಶಿ ಗುಣಗಳುಳ್ಳ ರಮೆಯರಸ ನಮ್ಮ ।
ದೇಶಾಧಿಪತಿ ವಿಜಯವಿಠ್ಠಲ ಕರುಣಾಳು॥

॥ ಬಡವರ ಮನೆಯಲ್ಲಿ ಒಡೆಯ ತನದಕಿಂತ ।
ಬಡಿವಾರೊಂದೆ ಸಾಕುವಿಜಯ ವಿಠ್ಠಲನೆಂಬೊ॥

॥ ಆರ ಅಜ್ಞಾನವೇನೊ (ಜ್ಞಾನವೇನೊ) ಎನಗದರಗೊಡವ್ಯಾಕೆ
ದೂರನೋಡದೆಕಾಯೊ ವಿಜಯವಿಠ್ಠಲರಂಗ ॥

॥ ಆವಾನುಪತ್ಯ ವರಿದರಾಗಲಿ ನೀನೆ ।
ಕಾವಾದೆ ಬಿಡದಿರು ವಿಜಯವಿಠ್ಠಲರೇಯಾ ॥

॥ ಅರ್ಭಕನ ಬಿನ್ನಹ ಗರ್ಭೀಕರಿಸಿಕೊಳ್ಳೊ ।
ಭೂರ್ಭುವ ವಿಜಯವಿಠ್ಠಲನೆ ಜಾರ ಚೋರ ॥

॥ ಹೊಟ್ಟೆ ಕಿಚ್ಚಿನ ದಾಸ ಹಲುಬಿ ಪೋಗುವದಾಸ ।
ದಟ್ಟ ದಾರಿದ್ರದಾಸನು ವಿಜಯವಿಠ್ಠಲರೇಯ ।

॥ ಇನ್ನಾದರೂ ಎನ್ನ ಕರ್ಮಮಾರ್ಗವಬಿಡಿಸಿ ।
ನಿನ್ನ ಧ್ಯಾನವ ಕೊಡೊ ವಿಜಯವಿಠ್ಠಲ ರೇಯ ॥

॥ ಪಿಡಿದೆ ನಿನ್ನ ಚರಣಾ ಪೀಡಿಸುವ ಕರ್ಮಾ ।
ಕಡಿದು ಪಾಲಿಸುವದು ನಿಧಿ ವಿಜಯ ವಿಠ್ಠಲಕರ್ತಾ ॥

॥ ಸಾಧನ ಎನಗಿದೇ ಇಂದಿರಾವಲ್ಲಭ ।
ಸಾಧುಗಳ ಪ್ರೀಯಾ ವಿಜಯವಿಠ್ಠಲರೇಯಾ॥

॥ ಹಿಂದಿನ ದುಷ್ಕರ್ಮಕಳಿಯಿತೇನೊ ।
ಇಂದು ನಿನ್ನ ಕಂಡೆ ಕರ್ತುವಿಜಯವಿಠ್ಠಲ ॥

॥ ತನ್ನಲ್ಲಿಸರ್ವವೂ ಅನುಕೂಲವಾಗಿರೆ ।
ಅನ್ಯರಾಶಿಯು ಸಲ್ಲ ವಿಜಯವಿಠ್ಠಲರೇಯಾ॥

॥ ಪಾದವೆ ಎನ್ನಗೊಂದು ಪರಲೋಕಕ್ಕೆ ಸಾಧನ ।
ಪಾದಜಾ ಲೋಚನ ವಿಜಯ ವಿಠ್ಠಲರೇಯಾ ॥

॥ ಸ್ತೋತ್ರ ರೂಪವಿದೆಂದು ನಿನ್ನ ಕೊಂಡಾಡಿದೆ ।
ಮಿತ್ರನಾಗಿ ಕಾಯೊ ವಿಜಯ ವಿಠ್ಠಲ ಪ್ರಭುವೆ ॥

॥ ನಾಮದ ಶರಣ ಮಾಡು ಮನುಮಥ ಜನಕ ।
ಕ್ಷೇಮಕೃತೆ ವಿಜಯ ವಿಠಲನೆದಯದಿಂದ ॥

॥ ಹರಿಯುಡೊಂಕಾದರೆ ಹರುವ ನೀರು ಡೊಂಕೆ ನಿನ್ನ ।
ಸ್ಮರಣೆ ಡೊಂಕಲ್ಲವೊ "ಮಾರ್ಗ" ವಿಜಯವಿಠ್ಠಲ ॥

॥ ಎಂತಾದರೆ ನಿನ್ನ ಚರಣ ಸ್ಮರಣೆ ಬಿಡ
ದಂತೆ ವಲಿಯೊ ಪುರಂದರ ವಿಜಯವಿಠ್ಠಲ ತಿಮ್ಮ ॥

॥ ಏನಿದ್ದ ಪ್ರಾರಬ್ಧ ಉಣಿಸಿ ಕಡೆಗೆ ಕಾಯೊ ।
"ಪ್ರಾಣದೊಲ್ಲಭ (ಧೃಗೆ)" ನಾಮಾ ಎನ್ನ ಪ್ರಾಣ ವಿಜಯವಿಠ್ಠಲ॥

॥ಉತ್ತಮಗೆ ನಮಿಸಿ ನೀಚಗೆ ನಮಿಸದಮನ ।
ವಿತ್ತು ಕಾಯೊ ಪ್ರಾಣ ವಿಜಯವಿಠಲನಿತ್ಯ॥

॥ಈ ಕ್ಷಣದಲಿ ಏನು ಫಲಿಸಿದ್ದೆ ಫಲವಯ್ಯಾ ।
ನಿಕ್ಷೇಪ ಅಹುದಯ್ಯಾ ವಿಜಯವಿಠ್ಠಲ ಎನಗೆ ॥

॥ ಪರರ ಸ್ತೋತ್ರವ ಮಾಡಿ ಉದರ ಪೊರೆದ
ರಿಂದ ಪರಗತಿಯಾಗದು ವಿಜಯವಿಠಲ ಎನಗೆ ॥

॥ ಋಣ ಪೋಗದಿರೆ ನಿನ್ನ ರ್ಚನಿಗೆ ಧ್ಯಾನಕೆ ಸಲ್ಲ ।
ಅನಿರ್ದೇಶವಪುಷ ಶ್ರೀ ವಿಜಯವಿಠ್ಠಲರೇಯ ॥

॥ ದಯಮಾಡೊ ಎನ್ನೊಡೆಯಾ, ದಾಸನೆಂಬುವದು
ನಿಶ್ಚಯವಾಗಿ ನಿರುತ ವಿಜಯವಿಠ್ಠಲ ಎನಗೆ ॥

॥ ಮಂಡೆಯಲಿ ಮುಡಿದ ಪೂಮಾಸದಂತೆ ಕಾಯೊ ಉ
ದ್ದಂಡವಿಜಯವಿಠ್ಠಲ ಅಹಂಕಾರವ ಕುಟ್ಟಿ ॥

॥ಕಾರುಣ್ಯದಲಿ ಸಂಸಾರಣ್ಯವ ಬಿಡಿಸಿ ।
ತಾರುಣ್ಯಮತಿಯ ನೀಯೊ ವಿಜಯವಿಠ್ಠಲರೇಯ ॥

॥ ಆಶೆಯಲ್ಲಿ ಬಂದು ಬಾಗಿಲ ಕಾಯ್ದೆನೊ ।
ಆಸಂಖ್ಯ ವಿಜಯವಿಠ್ಠಲ ದಾಸನೆನಿಸೊ ॥

॥ ಅಂದು ಇಂದು ಮಾಡಿದ್ದ ದೋಷವೆಣಿಸದೆ ।
ಸ್ಕಂಧಧರನಾಮ ವಿಜಯವಿಠ್ಠಲ ಕಾಯೊ ॥

॥ ನಮಿಸಿಬೇಡುವೆಸತತ ಮನ ನಿರ್ಮಳಮಾಡು ।
ಮಮತೆಯ ಬಿಡಿಸು ಭವದಲ್ಲಿ ವಿಜಯವಿಠ್ಠಲ ॥

॥ದುಷ್ಟಕಾಮಾದಿಗಳು ಬಿಡಿಸದಿರೆನೆಲೆಗಾಣೆ ।
ಧಿಟ್ಟಮೂರುತಿ ವಿಜಯವಿಠ್ಠಲಲೋಕೇಶ॥

॥ ಸಕಲ ಪ್ರಾಕುಪ್ರಾಕುಪ್ರಾಕು ಪಾಪ ಪ್ರಾಯಶ್ಚಿತ್ತ ।
ರುಕುಮಿಣಿಪತಿ ವಿಜಯವಿಠ್ಠಲ ನಿನ್ನನಾಮ ॥

॥ಮನಸೇ ನಿಲಿಸು ಸಕಲ ಇಂದ್ರಿಯಗಳ ಕಾಪಾಡು
ಮನಸಿಜನಯ್ಯನೆ ವಿಜಯವಿಠ್ಠಲರೇಯ॥

॥ ನಿಮಿಷಾರ್ಧ ವಾದರು ನಿನ್ನಂಘ್ರಿಯಲಿಮನ ।
ಸಮನೆನಿಸಿ ಪಾಲಿಸೊ ವಿಜಯ ವಿಠ್ಠಲಧೊರಿಯೆ ॥

॥ ವಿಷಯಾದಿಗಳಿಗೆರಗದಂತೆ ಒಳಗೆ ನಿಂತು ಕಾಯೊ ।
ವಷಟ್ಕಾರ ವಿಜಯವಿಠ್ಠಲ ಧ್ಯಾನಕ್ಕೆ ಬಾರೊ ॥

॥ ಎಲ್ಲ ಕಾಲದಲ್ಲಿ ಇದ್ದಂತೆ ಇದ್ದು ಹೀನ ।
ಖುಲ್ಲರ ಬಿಡಿಯೊ ಅಕ್ಷೋಭ್ಯ ವಿಜಯವಿಠ್ಠಲ ॥

॥ ಕೊಡುವೆನೆಂದು ನಿಂದು ನಿಲ್ಲಲಾಡಿದ ಮೇಲೆ ।
ಕೊಡದಿರಬಹುದೆ ವಿಜಯವಿಠ್ಠಲ ಸತ್ಯ ॥

॥ ಮನಸಿನ ವ್ಯಾಪಾರ ನೋಡಲು ಬಹುಕಠಿಣ ।
ಎನಗೆ ನಿಲ್ಲದು ದೇವ ವಿಜಯವಿಠ್ಠಲರೇಯ॥

॥ ಅಂದ ಮಾತನು ಕೇಳೊ ಬಂದು ಎನ್ನ ಮನಸು ।
ಪೊಂದಿ ನಿನ್ನರ್ಚಿಸಲಿ ವಿಜಯವಿಠ್ಠಲ ಶೌರಿ ॥

॥ ಬಿಡಿಸು ಬಿಡಿಸು ಜೀಯಾ ಭವದ ವ್ಯಾಕುಲವನ್ನು ।
ಪೊಡಮಡುವೆ ನಿನ್ನ ಪಾದಕೆ ವಿಜಯವಿಠ್ಠಲ ॥

॥ ಸ್ವಸ್ಥವಾಗದುಮನ ನೀನೊಲಿಯದರಿಂದ ।
ಶಸ್ತವಿಜಯವಿಠ್ಠಲ ನಿನ್ನಂತರ ತಿಳಿಯದು ॥

॥ನಿನ್ನ ಭಕ್ತರು ದಯಮಾಡಿದವನ ಚಿಂತೆ ।
ಘನ್ನವಾಗಿದೆ ನಿನಗೆ ವಿಜಯವಿಠ್ಠಲ ಕೃಷ್ಣ ॥

|| ಮನೋವಾಚ ಕಾಯದಲ್ಲಿ ಕೃಷ್ಣನೆಂದೆಂಬೊ ।
ನೆನವೆ ಎನಗಿರಲಿ ವಿಜಯ ವಿಠ್ಠಲರೇಯ ||

|| ಇದೆ ಇದೆ ಕರುಣಿಸು ಎನಗೆ ನಿರುತದಲ್ಲಿ ।
ಯದುಪತಿ ವಿಜಯವಿಠ್ಠಲರೇಯ ನೀನೊಲಿದು ||

|| ಅರಸನೊಲಿದವಗೆ ಯೆಂತಾದರೇನು ।
ಸರಸವಾಗಿಪ್ಪುದು ವಿಜಯವಿಠ್ಠಲರೇಯ ||

|| ಉತ್ತಮರ ಕೂಡಾಡುವ ಮತಿ ಇತ್ತು ।
ಉತ್ತಮಗತಿ ಈಯೊವಿಜಯವಿಠ್ಠಲರೇಯ||

|| ಬರಿದಾಗದಂತೆನ್ನ ಸೊಲ್ಲು ಲಾಲಿಸು ಮಹೇ ।
ಶ್ವರನಾಮ ವಿಜಯವಿಠ್ಠಲ ಭವಾಂಬುಧಿ ವಡಬ ||

|| ಅಭಯವ ನೀಯೊ ಸ್ವಾಭುಜ ವಿಜಯವಿಠ್ಠಲ ।
ಅಭಿಪ್ರಾಯವರಿತು ಸಾಕುವ ಅನಿಮಿಷಧೀಶ ||

|| ಅವರವರರಿತು ಕಾಯುವ ವಿಜಯವಿಠ್ಠಲ ।
ಅವನೀಶಾ ಎನ್ನರಿತು ಪೊರೆದು ಪಾವನಮಾಡೊ ||

|| ಕೋಟಿಗಾದರು ನಿನ್ನ ನೆನವೆ ಭವಾಬ್ಧಿಯ ।
ದಾಟಿಸುದಯದಿಂದ ವಿಜಯ ವಿಠಲನಂದ||

|| ಸಾಕುಮಾಡು ತಂದೆ ಸಂಸಾರದೊಳಗಿಂದ ।
ಶ್ರೀಕರಮೂರುತಿ ವಿಜಯ ವಿಠಲರೇಯ||

|| ನಿನ್ನಂಘ್ರಿ ತೊರೊ ನಿರ್ವಾಣ ವಿಜಯವಿಠಲ ।
ಯನ್ನಂಗವ ಪರಮ ಪಾವನ ಮಾಡೊ ||

|| ಪಾತಕಿ ಅಜಮಿಳನ ಸದ್ಗತಿಗೆ ಕರೆಸಿದ ।
ಪೂತಾತ್ಮ ನಾಮ ಎನ್ನ ಕಾಯೊ ವಿಜಯ ವಿಠ್ಠಲ ||

|| ಮಂದಮತಿಗೆ ಒಂದು ದಾರಿ ತೋರಯ್ಯ ।
ಸಂಧಾತ ವಿಜಯವಿಠ್ಠಲ ರುಗ್ಮಿಣಿನಲ್ಲ||

॥ ಅನಂತ ವಿಲಕ್ಷಣ ಉಳ್ಳ ಪರಮಪುರುಷ ।
ಅನಂತ ಶ್ರೀವಿಜಯವಿಠ್ಠಲ ಮನ್ನಿಸು ಎನ್ನ ॥

॥ ದೂರದೆ ಬಿಡನಯ್ಯ ಪೊರೆಯದಿದ್ದರೆ ಎನ್ನ ।
ದೂರನೋಡದೆ ಕಾಯೊ ದೃಷ್ಟ ವಿಜಯವಿಠ್ಠಲ ॥

॥ ದೇವಾಧಿ ದೇವನೆದಯ ಮಾಡೊ ದಾಸಗೆ ।
ನಿ ಒಲಿಯೊ ವೇಗ ವಿಜಯವಿಠ್ಠಲ ಸ್ವಾಮಿ ॥

॥ ಹೃದಯದೊಳಗೆ ನಿಂದು ಇಂತಾಡುವದೇನು ।
ವಿಧಿನಿಷೇಧ ಉಂಟೆ ವಿಜಯವಿಠ್ಠಲ ಎನಗೆ ॥

॥ ಅಂತಃ ಕರುಣಿ ನೀನೆ ಅಂತರಾತ್ಮಕ ನೀನೆ ।
ಸಂತೋಷಪಾಲಿಸು ವಿಜಯವಿಠ್ಠಲ ಒಲಿದು ॥

॥ ಕೈಯಾಬಿಡದಿರೊ ಎನ್ನ ಕೈಯಬಿಡದಿರೊಹರಿ ।
ಕೈಯಾ ಬಿಡದೆ ಕಾಯೊ ಅಯ್ಯ ವಿಜಯವಿಠ್ಠಲ ॥

॥ ಹಲವು ಮಾತೇನಯ್ಯ ನಿನ್ನಿಚ್ಛೆಯಲ್ಲದೆ ।
ಹಲುಬಿ ಫಲವಿಲ್ಲ ವಿಜಯವಿಠ್ಠಲರೇಯ ॥

ಚಿತ್ತದೊಲ್ಲಭನಮ್ಮ ವಿಜಯ ವಿಠ್ಠಲರೇಯ ನಿನ್ನ
ಚಿತ್ತಕ್ಕೆ ಬಂದದ್ದು ಮಾಡೊ ನಾ ನಿನ್ನವನು ॥

॥ ಶರಣೆಂದು ಪೊಕ್ಕರೆ ಕಾಯಿವ ಬಿರಿದು ನಮ್ಮ ।
ಅರಸೆವಿಜಯ ವಿಠ್ಠಲನಲ್ಲದೆ ಮತ್ತಿಲ್ಲ॥

॥ ಬೀಜಮಂತ್ರವೆ ಭಕುತಿಯಿಂದನೆನೆದ ಮೇಲೆ ।
ಪೂಜೆ ಎಂಬುವದೇನೊ ವಿಜಯವಿಠ್ಠಲದಾತ ॥

॥ ಜ್ಞಾನಭಕುತಿದೇಹಿ ಜ್ಞಾನ ಭಕುತಿದೇಹಿ ।
ಅನಾದಿನಾಮನೆ ವಿಜಯವಿಠಲನೆ ॥

॥ ನಿನ್ನವನೆಂಬೋದೆ ನಿಜವಾಗಿ ಇದ್ದರೆ ।
ಚೆನ್ನಾಗಿ ಪಾಲಿಸು ವಿಜಯವಿಠ್ಠಲರೇಯ ॥

॥ ಅಚ್ಚುತ ನಿನ್ನ ಪಾದಕ್ಕೆ ನಿಚ್ಚ ನಮಿಸುವೆನಯ್ಯ ।
ಅಚ್ಚುತಧ್ಯಾನವನೀಯೊ ಅಚ್ಚುತವಿಜಯವಿಠ್ಠಲ ॥

॥ ಬೇಡುವೆ ನಿನ್ನನು ಪರದಲ್ಲಿ ಇದನೆದಯ
ಮಾಡುಮಾನಸದಲ್ಲಿ ವಿಜಯವಿಠ್ಠಲರೇಯ॥

॥ ಅನಿಮಿತ್ಯಾಬಂಧು ನಿನ್ನ ಚರಣವೆ ಗತಿ ಎನಗೆ ।
ಕೊನಿಗೆ ಧ್ಯಾನವ ಕೊಡೊವಿಜಯ ವಿಠ್ಠಲಮೂರ್ತಿ ॥

॥ ಆವದು ನಾನೊಲ್ಲೆ ನಿನ್ನಯಪ್ರಸಾದ
ನೀವುದು ವಿಜಯವಿಠ್ಠಲ ಲೋಕಪಾಲ ॥

॥ ಚಿತ್ತದಲ್ಲಿ ಕಟ್ಟಿ ಎತ್ತಲು ಬಿಡೆನೊ ನಿನ್ನ ।
ಸುತ್ತಲಿ ತಿರುಗುವೇತಿರುಗಿಸುವೆ, ಧೀಶವಿಜಯವಿಠ್ಠಲ ರೇಯಾ॥

॥ ಜಾತಿ ಗೋತ್ರದಲಿ ಕರೆಯಲು ನೆಲೆಗಾಣೆ ।
ತಾತ ನೀನೆ ಒಲಿಯೊ ವಿಜಯವಿಠ್ಠಲ ಧೊರಿಯೆ ॥

॥ ಇವನೆ ಭಾಗ್ಯವಂತ ಮೂರು ಲೋಕದೊಳಗೆ ।
ಕವಿಗಳ ಮನೋಹರ ವಿಜಯವಿಠ್ಠಲ ರೇಯ ॥

॥ ಕರುಣಾಳು ವಿಜಯವಿಠ್ಠಲ ನಿನ್ನದಯವಾಗೆ ।
ಚರಣ ಹೊಳಿಯ ಗಾದೆ ಭವವೆಂಬೊ ವಾರಿಧಿ ॥

॥ ಮುದ್ದು ಮುಖವ ತೋರೊ ಮುಚಕುಂದ ವರದಾನೆ ।
ಎದ್ದು ಕರವ ಮುಗುವೆ ವಿಜಯವಿಠ್ಠಲ ರೇಯ ॥

॥ ಮೆಚ್ಚಿ ನೆಚ್ಚಿಸಲಾರೆ ಅರ್ಚಿಸಿ ಒಲಿಸಲಾರೆ ।
ನಿಚ್ಚ ನೀನೆ ಪೊರಿಯೊ ವಿಜಯವಿಠ್ಠಲ ಹರಿಯೆ ॥

॥ ಸಂಸಾರ ಸೇರಿ ಗತಿ ಪಡೆವವ ರಾರುಂಟು ಪ್ರಾ
ಗ್ವಂಶ ವಿಜಯವಿಠ್ಠಲ ಎನ್ನ ತೊಲಗದಿರೊ ॥

॥ ನಿತ್ಯಕೃತು ನಿನ್ನಂಘ್ರಿ ಕಾಣುವಂತೆ ಮಾಡು ।
ಕೃತಕೃತ್ಯ ನಾಮ ವಿಜಯ ವಿಠ್ಠಲ ಪೊಳೆದು॥

## ಉಪಾಸನಾ ಭಾಗ ಸುಳಾದಿಗಳು

|| ಧ್ಯಾನದಿಂದಲಿ ಮನಸು ನಿಲಿಸಿ ಜ್ಞಾನವಪಡೆದು ।
ಆನಂದ ವಿಜಯ ವಿಠ್ಠಲನಲೋಕವಸೇರೊ|| 1

|| ಸ್ಥೂಲ ಸೂಕ್ಷ್ಮಧ್ಯಾನವ ಭೇದವೆನಿಸೋದು ।
ನೀಲವರ್ಣವಿಜಯವಿಠ್ಠಲ ಪ್ರಾಕೃತ ರಹಿತ || 2

|| ಅಂಗುಟ ಪರಿಮಿತವಾಗಿ ಎನ್ನೊಳು ನಿಂದೂ ।
ಶ್ರಿಂಗಿಣಿವಿಜಯವಿಠ್ಠಲ ಎನ್ನ ಕರುಣಿಸೊ|| 3

|| ದ್ವಿವಿಧ ಕರ್ಮಗಳ ಹರಿಯಾ ಧೀನ ಚಿಂತನೆ ।
ವಿವರಿಸಿ ಮಾಡಲು ವಿಜಯ ವಿಠ್ಠಲಗೆ ಪ್ರೀತಿ || 4

|| ಸಿದ್ಧ ಸಾಧನವಿದು ಬಿಂಬಕಾಣುವದಕ್ಕೆ ।
ಪದ್ಮಿವಲ್ಲಭ ನಮ್ಮ ವಿಜಯವಿಠ್ಠಲ ಪ್ರಾಪ್ತಿ|| 5

|| ಜನುಮದೊಳಗೆ ಒಮ್ಮೆ ಈ ಪರಿ (ಸ್ಮರಿಸಲು) ಜಪಿಸಲು ।
ಗುಣತ್ರಯನಾಶನ ವಿಜಯವಿಠ್ಠಲ ಪೊಳೆವ || 6

||ಸಕಲಾ ಭರಣದಿಂದ ಒಪ್ಪುವ ಸಿರಿಕಾಂತ ।
ನಿಖಿಳೇಶ ವಿಜಯವಿಠ್ಠಲ ಶೇಷಗಿರಿಯರಾಯ || 7

|| ಸಕಲ ಬಗೆಯಿಂದ ಸಾಮವಂತನಾಗು ।
ರುಕುಮಿಣಿ ಪತಿ ವಿಜಯವಿಠಲನ್ನ ಸ್ಮರಿಸು|| 8

||ಅಚಾರವಂತನಾಗಿ ಧ್ಯಾನಮಾಡಲಿ ಬೇಕು ।
ರೋಚನ ಪ್ರಿಯ ವಿಜಯವಿಠ್ಠಲನ್ನ ಮೂರ್ತಿಗಳ || 9

||ಆಧ್ಯಾತ್ಮ ತಿಳಿಯುವದು ಭೌತಿಕ ದೇಹದೊಳು ।
ವಿದ್ಯಾವಂತರು ವಲಿಸೆ ವಿಜಯವಿಠ್ಠಲ ಒಲಿವ || 10

|| ಅರೋಹಣ ಅವರೋಹಣದಿಂದ ಹರಿಯಧ್ಯಾನಿಸೊ ।
ದಾರಢ್ಯವಾಹದು ವಿಜಯವಿಠ್ಠಲ ಪೊಳೆವಾ || 11

॥ ನಿಷ್ಕಾಮದಲಿಭಜಿಸಿ ನೀರೆರದುಸುಖಬಡು ।
ನಿಷ್ಕಳಂಕ ರೂಪ ವಿಜಯವಿಠ್ಠಲ ರೇಯಾ॥ 12

॥ ನಿದರುಶನವಾಗೆ ಜನನದ ಭಯವಿಲ್ಲ ।
ಉದುಭವ ನಾಮ ಸಿರಿ ವಿಜಯವಿಠ್ಠಲ ಪೊಳೆವಾ ॥ 13

॥ ಬಿಂಬ ಮೂರುತಿಧ್ಯಾನ ಇಂಬಾಗಿ ಪಾಡಲು ।
ಇಂಬು ತೋರುವನಲ್ಲಿ ವಿಜಯವಿಠ್ಠಲ ಪೊಳೆದು ॥ 14

॥ ಬ್ರಹ್ಮ ನಾಡಿಯೊಳಗೀಪರಿ ವಿಧ ಉಂಟು ।
ಬ್ರಹ್ಮಾತೀತ-ನಮ್ಮ ವಿಜಯವಿಠ್ಠಲಸ್ವಾಮಿ॥ 15

॥ ಕಮಲ ಕರ್ಣಿಕೆ ಮಧ್ಯ ಕಮನೀಯಭಕುತಿಯಲಿ ।
ಕಮಲಾಕರವಿಜಯವಿಠ್ಠಲನ್ನ ನೋಡಿರೊ ॥ 16

॥ ಉದಯಕಾಲದ ಲೆದ್ದು ವಿಜಯವಿಠ್ಠಲನ್ನ । ಅದು ಭೂತ
ಕ್ರೀಡೆಯ ನೆನಿಸಿ ಮುಕುತಿಯ ಬಯಸಿ ॥ 17

॥ ಇಂತು ಚಿಂತನೆ ಮಾಡುಸಚ್ಚಿದಾನಂದಾತ್ಮನ ।
ಅಂತುತೋರದಮಹಿಮ ವಿಜಯವಿಠ್ಠಲಹರಿ ॥ 18

॥ ಎನ್ನಿಂದ ಈ ಪೂಜೆ ಕೈಕೊಂಡು ನೆರವದು ।
ಇನ್ನೊಂದು ನಾನರಿಯೆ ವಿಜಯ ವಿಠ್ಠಲ ವಾಮನ ॥ 19

॥ ಹೃದಯವಾಸವಾಗಿ ಆರಾಧನೆಗೊಂಬ ।
ವಿಧಿಶಿವಾದಿಗಳೊಡೆಯ ವಿಜಯವಿಠ್ಠಲರೇಯ॥ 20

॥ ಶ್ರವಣ ಮನನ ಧ್ಯಾನೋಪಾಸನೆ ಮಾಡೋದು ।
ಜನುಮರಹಿತ ನಮ್ಮ ವಿಜಯವಿಠ್ಠಲ ಸುಳಿವ ॥ 21

॥ ಒಂದಾರಂಭಿಸಿಕೊಂಡು ಹದಿನಾರು ಪರಿಯಂತ ।
ನಂದಾ ಧ್ಯಾನವಮಾಡು ವಿಜಯವಿಠ್ಠಲ ಹರಿಯ ॥ 22

॥ ಜಡಜೀವಾನಂತ ಧಿಷ್ಠಾನದಲ್ಲಿ ನಿತ್ಯ ।
ಬಿಡದಿರು ವಿಜಯವಿಠ್ಠಲ ಅರ್ಚನೆ ಬಹು ॥ 23

॥ ಹರಿಯ ಚಿಂತಿಸು ಪಂಚ ಭೂತದಲ್ಲಿ ನಿತ್ಯ ।
ಕರುಣಾಳುವಿಜಯವಿಠ್ಠಲ ಏಕೀಭೂತ ॥

॥ ಸಂಚಿತಾಗಾಮಿನಾಶ ಪ್ರಾರಬ್ಧ ಉಪಮರ್ದ ।
ಪಂಚ-ಪ್ರಾಣೇಶ ಸಿರಿವಿಜಯವಿಠ್ಠಲ ಸಮ್ಮುಗಾ ॥

॥ ದಿನದಿನಕಿನಿತು ಧ್ಯಾನ ಮಾಡಲು ।
ನಿನಗೆ ಪ್ರಣವಮೂರುತಿ ವಿಜಯವಿಠ್ಠಲ ಪೊಳೆದು ನಿಲುವ ॥

॥ ಚಲ ಅಚಲಾಂತರದಲಿ ನಿತ್ಯ ಸೇವಿಸು ಮಹಾ ।
ಬಲವಂತ ವಿಜಯವಿಠ್ಠಲ ನಾನಾ ರೂಪಾ ॥

॥ ಹಗಲಿರುಳು ಚಿತ್ತ ವ್ಯಾಪ್ತ ಮಾರ್ಗದಲ್ಲಿಡು ।
ತ್ರಿಗುಣಾತೀತ ನಮ್ಮ ವಿಜಯವಿಠ್ಠಲ ಒಲಿವ ॥

॥ ಆವಾವ ಕ್ಷೇತ್ರಕ್ಕೆ ಕರೆದೊಯ್ದು ಎನ್ನಿಂದ ।
ಈ ವಿಧಾರ್ಚನೆಗೊಳ್ಳೊ ವಿಜಯವಿಠ್ಠಲಮೂರ್ತಿ ॥

॥ ಬಿಂಬ ಐಕ್ಯವೆ ಸಿದ್ಧ ವೈರಾಗ್ಯ ಮೂರೊಂದು ।
ಎಂಬೋದೆ ಇಪ್ಪುದು ವಿಜಯವಿಠಲ ಬಲ್ಲ॥

॥ ಘಾಳಿ ಮಧ್ಯ ಧೂಳಿಯೆ ತಡದವರುಂಟೆ ನಿ ।
ನ್ನಾಳುವ ವಿಜಯವಿಠಲ ನಿರಲು ಭಯವೇನು ॥

॥ ನೀಚಾಧಿಷ್ಠಾನದಲಿ ಹರಿಯ ಪೂಜಿಸದಿರು ।
ಯೋಜಿಸು ವಿಜಯವಿಠಲನ ಅಧಿಕಾರಿಯಲ್ಲಿ ॥

॥ ಆವಾವವಾದರು ತಪ್ಪೆ ಲೇಶ ಭಂಗವಿಲ್ಲ ।
ಶ್ರೀ ವಿಜಯವಿಠಲನ್ನ ನಾಮಬಿಟ್ಟರೆ ಭಂಗ ॥

॥ ಈ ಸುಮೂರ್ತಿಗಳಲ್ಲಿ ಒಂದು ಮೂರ್ತಿಯಧ್ಯಾನ ।
ಲೇಸಾಗಿ ಕೊಡುವದು ವಿಜಯವಿಠ್ಠಲ ಪೂರ್ಣ ॥

॥ ನಂಬಿರೊ ನೆರೆನಂಬಿ ಜಗದಂಬಿಕೆನಾಥನ ।
ಇಂಬು ಕೊಡುವ ಈತನೆ ವಿಜಯವಿಠ್ಠಲಾಧೀನಾ ॥

॥ ಭಕ್ತಿಯಿಂದಲಿ ಭಜಿಸೆ ಭವದಿಂದ ಕಡೆಮಾಡಿ ।
ಮುಕ್ತಿಯಲ್ಲಿಡುವ ವಿಜಯವಿಠ್ಠಲ ಪೊಳೆದು ॥

॥ ಎತ್ತಲಾದರು ಎನಗೆ ಇಷ್ಟು ಪುಣ್ಯದಿಂದ ।
ನಿತ್ಯ ಸತ್ಯ ಮೂರ್ತಿ ತೋರೊ ವಿಜಯ ವಿಠ್ಠಲಾ ॥

॥ ಲೊಹ ಕ್ಷೇತ್ರನಿವಾಸ ಗೋವಳೇಶಾ ।
ಪಾಹಿ ಪಂಢರಿರಾಯ ವಿಜಯವಿಠ್ಠಲಪ್ರೀಯಾ॥

॥ ಗುರುದ್ವಾರವಿಲ್ಲದೆ ಸಾಧ್ಯ ಸಿದ್ದನಾಗುವನೆ ।
ಗುರುವಾಯು ವಿಜಯವಿಠ್ಠಲಗೆ ವಂದಿಸಬೇಕು ॥

॥ ನಮ್ಮ ಗುರುಗಳ ಕವನ ಮಿಥ್ಯಾಮತವೆಂದವನು ।
ಬೊಮ್ಮರಕ್ಕಸಕಾಣೊ ವಿಜಯವಿಠ್ಠಲ ಬಲ್ಲಾ ॥

॥ ಋಗ್ವೇದಾದಿಯಲ್ಲಿ ತಿಳಿದು ಕಾ
ಲಾಗ್ರಾಖಂಡಿಸಿ ವಿಜಯವಿಠ್ಠಲನ ಪೆಸರು ।

॥ ರಸನದಲ್ಲಿ ಇಂತು ನುಡಿದರೆ ತನ್ನ ದ
ರುಶನ ಕೊಡುವ ನಮ್ಮ ವಿಜಯವಿಠ್ಠಲವೊಲಿದು॥

॥ ಭಗವನ್ಮೂರ್ತಿಗಳನ್ನು ಚಿಂತಿಸು ಅಲ್ಲಲ್ಲಿ ।
ಅಘ ನಿರ್ಲೇಪ ನಾಗುವಿಜಯವಿಠ್ಠಲ ಪೊಳಿವಾ ॥

॥ ಸ್ವಲ್ಪ ಪೇಳಿದೆ ಇದೆ ಬಿಡದೆ ಚಿಂತಿಸು ಅಹಿ- ।
ತಲ್ಪ ವಿಜಯವಿಠ್ಠಲಗರ್ಪಿಸೆ ಕೈಕೊಂಬಾ॥

॥ ಚಿಂತನೆಪ್ರಕಾರ ವಿನಿಯೋಗ ಮಾಡು ಶ್ರೀ
ಕಾಂತವಿಜಯವಿಠ್ಠಲ ಕೃಷ್ಣಗೆ ಪದಾರ್ಥಗಳಾ॥

## ॥ ಸ್ತೋತ್ರಭಾಗ ಸುಳಾದಿಗಳ ಜತೆ ॥

॥ ಸ್ವಾಮಿ ಪುಷ್ಕರಣೆಯವಾಸಿ ಕ್ರೋಡವೇಷ ।
ಭೂಮಿರಮಣ ನಮ್ಮ ವಿಜಯವಿಠ್ಠಲ ತಿಮ್ಮಾ ॥ 1

॥ ಪ್ರಹ್ಲಾದ ವರದ ಪ್ರಪನ್ನ ಕ್ಲೇಶಭಂಜನ್ನ ।
ಮಹಾಹವಿಷೆ ವಿಜಯವಿಠ್ಠಲನರಮೃಗವೇಷಾ॥

॥ ಭೃತ್ಯವತ್ಸಲ ನಿನ್ನ ರೂಪಕ್ಕೆ ನಮೊ ನಮೊ ।
ದೈತ್ಯಮರ್ದನ ವಿಜಯವಿಠ್ಠಲ ಕಟಿತರುವಾಯ ॥

॥ ಇಂದ್ರಂಗೆ ಸುರಪದವಿಕೊಡಿಸಿ ಬಲಿಗೆ ಒಲಿದಾ ।
ಕಂದರ್ಪಪಿತ ನಮ್ಮ ವಿಜಯವಿಠ್ಠಲ ವಟು ॥ 4

॥ ಭಾವಿ ಸಪ್ತ ಋಷಿಯ ಭಕ್ತವತ್ಸಲ ಕರು
ಣಾವ ಲೋಕನ ರಾಮಾವಿಜಯವಿಠ್ಠಲಮುಖ್ಯಾ ॥ 5

॥ ಸಾರ್ವಭೌಮನೆರಾಮಾ ದುರುಳ ದೈತ್ಯವಿರಾಮ ।
ಸರ್ವಯೋಗಿ ವಿನಿಶ್ರುತಾ ವಿಜಯವಿಠ್ಠಲ ॥

॥ ನಿನ್ನ ಮಾಯಾ ಮೋಹ ಖಳರಿಗೆ ತಮಸ್ಸು ಆ
ಪನ್ನರಿಗೆ ಮೋಕ್ಷ ವಿಜಯವಿಠ್ಠಲ ಧೊರಿಯೆ ॥ 7

॥ ನರಹರಿ ತೀರ್ಥರಿಗೆ ಒಲಿದ ವಿಜಯವಿಠ್ಠಲ ।
ಸ್ಮರಿಸಿದವರ ಕಾವಾ ನಿತ್ಯ ರಘುರಾಮಾ॥ 8

॥ ವಸುಧೀಂದ್ರ ಮುನಿಯಿಂದ ನಾನಾ ಪೂಜೆಯಗೊಂಡು ।
ವಸುಧಿಯೊಳಗೆ ಮೆರೆವ ವಿಜಯವಿಠ್ಠಲರಾಮಾ ॥ 9

॥ ಧಂಧನ್ವಂತರಿ ಎಂದು ಪ್ರಣವಪೂರ್ವಕದಿಂದ ।
ವಂದಿಸಿ ನೆನೆಯಲು ವಿಜಯವಿಠ್ಠಲ ಒಲಿವಾ ॥ 10

|| ಗುರುವಾದಿರಾಜರಿಗೆ ಒಲಿದಹಯವದನ ।
ಕರುಣಾಕರ ಮೂರ್ತಿ ನಮ್ಮ ವಿಜಯ ವಿಠ್ಠಲರೇಯಾ ||

|| ಅಂಜನಾಭ ಅಮೃತವಪುವೆ ಋಷಭ ನೀ
ರಂಜನಮೂರ್ತಿ ವಿಜಯವಿಠ್ಠಲ ಸ್ವಾಮಿ ||

|| ದತ್ತ ಪ್ರಧಾನ ವಿದ್ಯಾಸಪ್ರದಾತಾ ಪಾರ
ತಂತ್ರರಹಿತ ವಿಜಯವಿಠ್ಠಲ ಪ್ರಾಜ್ಞ ||

|| ಕಪಿಲಕಪಿಲದೇವ ದೇಶಕಾಲತ ಪೂರ್ಣ ।
ದೃಪದನಂದನೆವರದವಿಜಯವಿಠ್ಠಲಮೂರ್ತಿ||

|| ತಮಪರಿಚ್ಛೇದ ಈತನ ಸ್ಮರಣೆ ನೋಡು ಹೃ
ತ್ಕಮಲದೊಳಗೆ ವಿಜಯವಿಠ್ಠಲನ್ನಚರಣಾಬ್ಜ ||

|| ಬಾದರಾಯಣ ಸುಖಕಾರಣ ಭಕುತರಿಗೆ ।
ವೇದ ವ್ಯಾಸನೆ ವಿಷ್ಣು ವಿಜಯವಿಠ್ಠಲ ವ್ಯಾಸ ||

||ಪಾರ್ಥಸಾರಥಿ ಕುರುವಂಶ ಘಾತಕನೆಮು
ಕಾರ್ಥ ಎನ್ನಧೊರೆ ವಿಜಯವಿಠ್ಠಲರೇಯಾ||

|| ನಾಡದೈವದಗಂಡ ವಿಜಯವಿಠ್ಠಲ ನಿನ
ಗಾಡದವರೆ ಯಿಲ್ಲ ಎನ್ನಮನ್ನಿಸಿ ಕಾಯೊ||

|| ಚಿಕ್ಕಮಕ್ಕಳ ಕೂಡಾ ನಲಿದಾಡಿದಸ್ವಾಮಿ ।
ಲುಕ್ಕುಮಿರಮಣ ವಿಜಯವಿಠ್ಠಲಕೃಷ್ಣ ||

|| ಸುವಿರುದ್ಧಕರ್ಮಗಳು ತೋರುವ ಪರಬೊಮ್ಮ ।
ಅವಿಕಾರಮೂರುತಿ ವಿಜಯವಿಠ್ಠಲರೇಯಾ ||

|| ಅಪ್ರಾಕೃತನಾಗಿ ಪ್ರಾಕೃತದಲಿಮೆರೆದೆ ।
ಅಪ್ರಮೇಯನಾಮಾ ವಿಜಯವಿಠ್ಠಲ ಅನಾದಿ||

॥ಅಮರಾಸುರರಿಗೆ ಸೌಖ್ಯ ದುಃಖಕ್ಕೆ ಕಾರಣ ।
ನಮೊ ನಮೋ ಸೋಮ ವಿಜಯವಿಠ್ಠಲ ಗೋಪಾ ॥

॥ ಅಂದು ನಾರದ ಪುರಂದರದಾಸರಾ ।
ಮಂದಿರದೊಳು ಕುಣಿದಾ ವಿಜಯವಿಠ್ಠಲ ಒಲಿದಾ ॥

॥ ನಿಮ್ಮ ಮಹಿಮೆಗೆ ಅನಂತಾನಂತ ನಮೋ ॥
ಬೊಮ್ಮಗೆ ಪರಬೊಮ್ಮ ಗಹನ ವಿಜಯವಿಠ್ಠಲಾ ॥

॥ ನಾ ಮುಂದೆ ನೀಹಿಂದೆ ಗುರುವಿಕೆ ನಿನಗೇಕೊ ।
ಸಾಮಗ ವಿಜಯವಿಠ್ಠಲನೆ ಎನ್ನಧೀನಾ॥

॥ ಕಂಡವರಿಗೆ ಮುನ್ನೆ ಪ್ರಾಯಶ್ಚಿತ್ತವೆ ಇಲ್ಲ ।
ಕುಂಡಲಿಶಯನ ಶ್ರೀವಿಜಯವಿಠ್ಠಲ ನಿನಗಂಜೆನೊ ॥

॥ ಅಡಿಗಡಿಗೆ ಚಿಂತಿಸಿ ಬಡವಾಗುವದ್ಯಾಕೊ ।
ಒಡೆಯಾ ನೀನೆ ಗತಿಯೊ ವಿಜಯವಿಠ್ಠಲಸ್ವಾಮಿ ॥

॥ ಹರನಶಿರಮುಕುಟ ನಿನ್ನ ಪಾದ ಪೀಠವೊ ರನ್ನ ।
ಪೊರೆವದುದಯದಿಂದ ವಿಜಯವಿಠ್ಠಲ ಎನ್ನ ॥

॥ ಯಾತರಿಂದಲಿ ನಿನ್ನ ವೊಲಿಸಿಕೊಳಬಲ್ಲನೆ ।
ಧಾತಾ ರುತ್ತಮ ನಾಮಾ ವಿಜಯವಿಠ್ಠಲ ಎನ್ನ ॥

॥ ನೀರೇವೆ ನೋಡಲು ನಾನಾಕಭೋಜನಾ ।
ಸಾರವಾಗುವದಯ್ಯಾ ವಿಜಯವಿಠ್ಠಲಪ್ರಿಯಾ ॥

॥ಆವಧ್ಯಾನವೊ ನಿನ್ನ ದಾವ ಕ್ರೀಡೆಯೊ ತಿಳಿಯದು ।
ಆವ ನೂತನವು ಮಹಾಭೋಗಾ ವಿಜಯ ವಿಠ್ಠಲಾ ॥

॥ಮುಗ್ಗಿದಲ್ಲಿಗೆ ಬಂದು ಒದಗುವ ಕರುಣಾಳು ।
ಕುಗ್ಗಗೊಡದೆ ಕಾಯೊ ವಿಜಯವಿಠ್ಠಲರೇಯಾ ॥

॥ ನೀನೆಂದು ನಂಬಲು ಲಿಂಗಶರೀರವ ।
ಹಾನಿಮಾಡುವ ವಿಷ್ಣು ವಿಜಯವಿಠ್ಠಲನೊಲಿದು ॥

॥ ಸ್ವಾರಾಮಿತ್ತಮಸಂವರ ನಿನ್ನ ಸದನವು ।
ಸರಿಬಂದಲ್ಲಿಡು ಧಾತಾ ವಿಜಯ ವಿಠ್ಠಲರೇಯಾ॥

॥ ಅಪ್ರತಿಪ್ರತಾಪಾ ಅಪ್ರತಿ ಅರಸೆಪು ।
ಣ್ಯಪ್ರಭಾವ ವಿಜಯವಿಠ್ಠಲನೆ ಸರ್ವೋತ್ತಮಾ॥

॥ನನ್ನಂಥವನ ಪೂಜೆಯಿಂದ ನಿನಗೇನು ।
ಅನಂತಾನಂತನೆ ವಿಜಯವಿಠ್ಠಲಸುಲಭಾ॥

॥ ಹೊಸ ಪರಿಯವ್ಯಾಪಾರನಿನ್ನಲ್ಲಿ ಇರಲಾಗಿ ।
ಅಸುರರಿಪುವಿಜಯವಿಠ್ಠಲ ಎನಗೆ ಇನಿತೊ ॥

॥ ಭೂತ ಸೋಕಿದವಗೆ ದೂಷಣಭೂಷಣವೇನು ।
ವಾತವಂದೀತ ವಿಜಯವಿಠ್ಠಲ ಬಲ್ಲದ್ದೇ ಸರಿ॥

॥ ಅಹಂಕಾರವನು ಬಿಟ್ಟು ದೇಹದೇಹಿ ಎಲ್ಲಾ ।
ಮಹಾಬಲ ವಿಜಯವಿಠ್ಠಲಗೆಂದು ಗತಿ ಗಾಣೊ ॥

॥ ನಿನಗೆ ನೀನೆ ಪೂಜೆ ಮಾಡಿಕೊಂಬದೇವ ।
ಎನಗಾವ ಸಥಿ ಇಲ್ಲಾ ವಿಜಯವಿಠ್ಠಲ ನೀನೇ ॥

॥ ಭಕುತರಮನೋಹರಾ ಸೌಭಾಗ್ಯವಂತ-ವಿ ।
ರಕ್ತರಪ್ರಿಯಾ ಸಿರಿವಿಜಯವಿಠ್ಠಲರೇಯಾ॥

॥ ಈತನ ಕಾಣದಲಾರಿಗೆ ಗತಿ ಇಲ್ಲಾ ।
ಅತುಮವಂತ ನಾಮವಿಜಯವಿಠ್ಠಲ ಬಲ್ಲ ॥

॥ ದಾಸರಾಡಿದ ಲೀಲೆ ನಿನಗೆ ಸಂತೃಪ್ತಿಯೊ ।
ಭೂಷಣನಾಮ ಸಿರಿವಿಜಯವಿಠ್ಠಲವೊಡಿಯಾ ॥

॥ ಪಕ್ಕೆಯೊಳಗೆ ಪಕ್ಕಿ ಮಕ್ಕಳ ಸಾಕಿದಂತೆ ।
ಅಕ್ಕರದಲಿ ವಿಜಯವಿಠ್ಠಲಭಕ್ತರಕಾವೆ ॥

॥ ಎಷ್ಟುಪಾತಕ ದವನಾನಾದರೂ ವಿಜಯ ।
ವಿಠ್ಠಲ ನಿನ್ನ ನಾಮ ಪಾವನ್ನ ಮಾಡುವದು॥

॥ಹರಿನಾಮಸರಿಯಾದ ಕುರುಹುನಾನರಿಯೆನು ।
ಅರಿದವರಿಗೆ ನಮೋಶ್ರೀಶಾ (ಗಿರಿಶಾ) ವಿಜಯವಿಠ್ಠಲಾ ॥

॥ಹರಿನಾಮಾಮೃತ ಉಣಬಲ್ಲಜ್ಞಾನಿಗೆ ।
ಬರಿದೆ ನೆಚ್ಚನು ವಿಷಯಾ ವಿಜಯವಿಠ್ಠಒಲಿವಾ॥

॥ ಇತ್ತಾಮುಂದಾಗೆ ನಮಗೆ ಮುನ್ನಾವ ಭಯ ನಮಗಿಲ್ಲ ।
ಚಿತ್ತಜಪಿತ ವಿಜಯವಿಠಲನೇ ಗತಿ ಎನ್ನೋ ॥

॥ ಮಾತುಮಾತಿಗೆ ಹರಿನಾಮವೆ ಗತಿ ಎನ್ನು ।
ಗಾತುರನಿರ್ಮಲನಾ ವಿಜಯವಿಠ್ಠಲ ವೊಲಿವಾ ॥

॥ ನರಕಾದವರ ಉದ್ಧಾರಮಾಡಿದ ನಾಮಾ ।
ಪರಿಪೂರ್ಣ ರಕ್ಷಣ ವಿಜಯವಿಠ್ಠಲನಾಮಾ॥

॥ ತೂಲವೆಂಬೊ ಪಾಪಕ್ಕೆ ಪಾವಕ ಹರಿನಾಮಾ ।
ತಿಳಿದು ಶ್ರೀ ಮಾತೆ ನಮ್ಮ ವಿಜಯವಿಠ್ಠಲನೊಲಿಸೆ ॥

॥ವಿಷಯಂಗಳಲ್ಲಿ ಚರಿಸಿದರೇನು ನಿನ್ನ ।
ಪೆಸರುಗೊಂಡರೆ ಪುಣ್ಯ ವಿಜಯವಿಠ್ಠಲರೇಯಾ॥

॥ಬಹಿರಂತರ ರೋಗನಿವಾರಣವಾಗುವದು ।
ಅಹಿಶಾಯಿ ವಿಜಯವಿಠ್ಠಲ ನಾಮ ಔಷಧಕೆ ॥

॥ ಬೊಮ್ಮಾಂಡನುಂಗಿ ಉಗುಳವ ಮಹಾದೈವವೆ ।
ಈ ಮ್ಮಹಿಮೆ ಅರಿದೆ ವಿಜಯವಿಠ್ಠಲ ನಿನಗೆ ॥

॥ ಧನ್ಯನಾದೆನೊ ಇಂದು ದಾನವಾರಿಯ ಕಂಡು ।
ಪುಣ್ಯಸಂಪಾದಿಸಿದೆ ವಿಜಯವಿಠ್ಠಲನಿಂದ ॥

॥ ಸಾಸಿರ ಮೂರುತಿ ಶತಾನಂತ ಮೂರುತಿ ॥
ಸಾಸಿರನಯನ ಶ್ರೀವಿಜಯವಿಠ್ಠಲ ಸುಳಿದಾ ॥

॥ ಕಂಡು ಧನ್ಯನಾದೆ ಕಮನೀಯ ಮೂರುತಿಯ ।
ಮಂಡಲೇಶನಯ್ಯಾ ವಿಜಯವಿಠ್ಠಲದೇವನ ॥

॥ ಎನಗಲ್ಲಾ ಎನಗಲ್ಲಾ ಅರುಮಾಡಿದಮಾನಾ ।
ನಿನಗೆಂದು ಒಡಂಬಡುವೆ ಈಶ ವಿಜಯವಿಠಲಾ ॥

॥ ಈ ಪರಿ ಇದ್ದವನು ಬಚ್ಚಲಂದಿಯಾಡೆ ।
ಪಾಪಾಲೇಪನವಿಲ್ಲಾ ವಿಜಯವಿಠ್ಠಲ ಅವಗೆ ॥

॥ ಪಾಪಪುಣ್ಯಗಳೆರಡು ನಿನ್ನಾಧೀನವಯ್ಯಾ ।
ಶ್ರೀಪತಿವಿಜಯವಿಠ್ಠಲ ವಿಶ್ವದಾಧಾರ ॥

॥ಉಂಟುಂಟು ವಿಜಯವಿಠ್ಠಲನೆಂದವಗೆ ಭಯದ ।
ಗಂಟಲನೊದೆದು ವೈಕುಂಠಪುರದಗತಿ ॥

ದುರ್ಗೇ ಹಾಹೇಹೊಹಾ ದುರ್ಗೆ ಮಂಗಳದುರ್ಗೆ ।
ದುರ್ಗತಿ ಕೊಡದಿರುವಿಜಯವಿಠ್ಠಲ ಪ್ರೀಯೇ ॥

॥ ವನಜಜಾಂಡಗಳೆಲ್ಲ ದಿನದಿನಪಾಲಿಪ ।
ಧನುರ್ಧರ ವಿಜಯ ವಿಠಲನ ಪ್ರೇಮದ ದಾಸಾ ॥

॥ ಮೂರವತಾರದಗುರುವೆ ಸುರತರುವೆ ।
ವಾರ ವಾರಕ್ಕೆ ವಿಜಯವಿಠಲನ್ನ ಪ್ರತಿಬಿಂಬ ॥

॥ ಒಡೆಯ ನಾಜ್ಞೆವ ತಾಳಿ ಕಾರ್ಯಮಾಡಿದ ಗುರುವೆ ।
ಕಡು ಸಮರ್ಥ ವಿಜಯವಿಠಲನ ನಿಜದಾಸ ॥

॥ಮೂರವತಾರದಲ್ಲಿ ಕಾರ್ಯಮಾಡಿದಹಸ್ತ ।
ಧೀರ ಶ್ರೀವಿಜಯವಿಠ್ಠಲಗೆರಗಿದ ಹಸ್ತ ॥

॥ಚಿತ್ತದಲ್ಲಿ ಚರಣ ಭಜಿಸಿದ ಜೀವಿಗೆ ।
ನಿತ್ಯಾಯು ಉತ್ಸಹ ವಿಜಯವಿಠ್ಠಲಕೊಡುವ ॥

॥ ಅನಂತ ಜನುಮಕ್ಕೆ ನೀನೆಗುರು ಎಂಬ ।
ಜ್ಞಾನವೇ ಕೊಡುಜೀಯಾ ವಿಜಯವಿಠ್ಠಲದಾಸಾ॥

॥ ಅರಿ ಭಯಂಕರ ಭೀಮ ವಿಜಯವಿಠ್ಠಲ ।
ನರಹರಿಮನಮೆಚ್ಚಿನಡದಾ ಭೀಮಾವತಾರಾ॥

॥ಅದ್ವೈತ ವನದಾವಾ ಮಧ್ವರಾಯರ ಶ್ರೀ ಪಾ ।
ದದ್ವಯ ನೆನೆದು ವಿಜಯವಿಠ್ಠಲನ್ನ ಸೇರೊ ॥

॥ ಪ್ರಾಣಗತಿ ಬಂದರೂ ಮಧ್ವಮತ ಬಿಡದಿರೀ ।
ಪ್ರಾಣಧೃತು ನಾಮ ನಮ್ಮ ವಿಜಯವಿಠ್ಠಲ ಗರ್ಪಿಸೊ ॥

॥ ಅದ್ವೈತ ಮತಾ ರಣ್ಯ (ವನ) ದಾವಾ ವ್ಯಾಸಶಿಷ್ಯ ।
ಮಧ್ವಮುನಿ ವಿಜಯವಿಠ್ಠಲನ್ನ ನಿಜದಾಸಾ ॥

॥ ಅದ್ವೈತ ಮತ ಕೋಲಾಹಲರಿಪುಮಸ್ತಕ ಶೂಲಾ ।
ಮಧ್ವರಾಯಾ ವಿಜಯ ವಿಠ್ಠಲನ್ನ ಮಹಾಪ್ರೀಯಾ ॥

॥ ಮೋದತೀರ್ಥರ ಮತ ಸೇನಾಧಿ ಪತಿಯಾದ ।
ವಾದಿರಾಜ ಮುನಿಯು ವಿಜಯವಿಠ್ಠಲ ದಾಸಾ ॥

॥ ಮೇಘನಾಥಪುರ ಕಕುರವೇಣಿ ವಾಸ ।
ರಾಘವೇಶ ವಿಜಯ ವಿಠ್ಠಲನ್ನ ನಿಜದಾಸ ॥

॥ ಧ್ರುವ ಮರಿಯದಲೆ ಇದನೆ ಓದಿದವಗೆ ಬಂದ ।
ಭವರೋಗ ಪರಿಹಾರ ವಿಜಯವಿಠ್ಠಲ ವೊಲಿವಾ ॥

॥ ಪ್ರಲ್ಹಾದನೆ ವ್ಯಾಸ ಮುನಿಯೇ ರಾಘವೇಂದ್ರ ।
ರಹು ದೆಂದು ಭಜಿಸಿರೊ ವಿಜಯವಿಠ್ಠಲವೊಲಿವಾ ॥

॥ ಹರಿಪ್ರಸಾದಾದವಗೆ ಆವಾದಾದರು ಕಡಿಮೆ ।
ನರರಿಗೆ ಅಗುವದೆ ವಿಜಯವಿಠ್ಠಲ ಪೊಳಿವಾ ॥



## ತೀರ್ಥ ಕ್ಷೇತ್ರಮಹಿಮಾ

|| ವೆಂಕಟೇಶನೆ ನಮೊ ವೆಂಕಟೇಶನೆ ನಮೊ ।
ಸಂಕಟಪರಿಹರಿಸೊ ವಿಜಯ ವಿಠ್ಠಲರೇಯಾ || ।

||ವರಗಿರಿಯಯಾತ್ರಿಮನ ಮುಟ್ಟಿ ಮಾಡಲು ।
ವರವೀವ ಪರನಾಮಾವಿಜಯವಿಠ್ಠಲ ತಿಮ್ಮಾ ||

|| ಈ ಗಿರಿಯ ಯಾತ್ರಿ ಮಾಡಿದಾ ಜನರಿಗೆ ।
ನಾಗಶಯನ ವಿಜಯವಿಠ್ಠಲ ವೆಂಕಟ ವೊಲಿವಾ ||

||ಅಪ್ರತಿಯಾತ್ರೆ ಇದು ಕಂಡವರಿಗಾಗದು ।
ಸ್ವಪ್ರಕಾಶವಿಜಯವಿಠ್ಠಲ ವೆಂಕಟಬಲ್ಲ ||

|| ಅನಂತ ಜನ್ಮದ ಪುಣ್ಯಫಲಿಸಿದರೆ ।
ಅನಂತಗಿರಿಯಾತ್ರಿ ನೀವ ವಿಜಯವಿಠ್ಠಲ ||

|| ಧರಿಗಿದೆ ವೈಕುಂಠವಾಗಿ ಮೆರೆವ ಚನ್ನ ।
ತಿರುಮಲೇಶ ಸಿರಿ ವಿಜಯವಿಠ್ಠಲ ನಿಪ್ಪ||

|| ಕಾಮಿತಾರ್ಥ ಪ್ರದಾಯಕ ತಿರುವೆಂಗಳ ।
ಸ್ವಾಮಿ ವೆಂಕಟರನ್ನ ವಿಜಯವಿಠ್ಠಲ ವೊಲಿವಾ||

||ಮತ್ಸರವನು ಅಳಿದು ಶ್ರೀವೆಂಕಟೇಶನ ಯಾತ್ರೆ ।
ಉತ್ಸಹದಲಿ ಮಾಡೆ ವಿಜಯವಿಠ್ಠಲ ವೊಲಿವಾ ||

|| ನಮೊನಮೊ ನಿನ್ನೀ ವಾರ್ತಿಗೆ ಕೀರ್ತಿಗೆ ಮೂರ್ತಿಗೆ ।
ಸುಮನಸಾದ್ರಿರಾಯಾ ವಿಜಯವಿಠ್ಠಲ ವೆಂಕಟ ||

||ಶರಣರಿಗಾಗಿ ನಿರ್ಜರರ ವಾಲಗ ಬಿಟ್ಟು ।
ಉರಗಾದ್ರಿಯಲಿನಿಂದಾ ವಿಜಯವಿಠ್ಠಲ ವೆಂಕಟ ||

|| ಮನಸು ಬಂದಂತೆ ಮಹಾ ಮಹಿಮೆ ತೋರುವ ದೇವ ।
ಅನಿಮಿಷಗಿರಿ ವಾಸ ವಿಜಯವಿಠ್ಠಲ ವೆಂಕಟ ||

|| ಅರಸಿನಿಂದಲಿ ಅಧಿಕ ಭೃತ್ಯನಿಗೆ ಪಾಲಿಸುವ ।
ಹಿರಿಯಾರಿಪ್ಪರು ಬಿಡದೆ ವಿಜಯವಿಠ್ಠಲಧೊರಿಯೆ ||

॥ಧರೆಯೊಳು ಮೆರೆವಸಿರಿ ತಿರುವೆಂಗಳಪ್ಪ।
ತಿರುಮಲವಿಜಯವಿಠ್ಠಲ ಜಗನ್ಮೋಹನ ॥

॥ ಇತ್ತ ಮುನ್ನಾ ಎನ್ನೊಳಿರಸಲ್ಲದಾದಡೆ ।
ಚಿತ್ತಕ್ಕೆ ಬಂದಂತೆ ಮಾಡೊ ವಿಜಯವಿಠ್ಠಲ॥

॥ಮಾತುಮಾತಿಗೆ ತಿರುವೆಂಗಳೇಶಾ ಎನ್ನು ।
ಭೂತಕೃತು (ನಾಮಾ) ವಿಜಯವಿಠ್ಠಲನ ಪಾದವಕಾಣೊ ॥

॥ಪಾವಿತ್ರನಾನಾದೇ ಪರಮಪುರುಷನ ನೋಡಿ ।
ಪಾವಿತ್ರ ನಾಮಕ ವಿಜಯವಿಠ್ಠಲರೇಯಾ ॥

॥ ತಿರುವೆಂಗಳೇಶ ನಂತರ ದೊಳು ಚಿಂತಿಸಿ ।
ವರಗಿರಿ ವಿಜಯ ವಿಠ್ಠಲನಮನದಲ್ಲಿ ಕಂಡೆ ॥

॥ ವೈಕುಂಠ ಇದೆ ಎಂದು ಮೆರೆವ ತಿರುವೆಂಗಳ।
ವೈಕುಂಠನಾಮಸಿರಿವಿಜಯವಿಠ್ಠಲವರದಾ॥

॥ ದಿಲೀಪ ವರದಾ ಪನ್ನಂಗ ಮಹಿಧರಧೀಶ ।
ಲೋೀಲಾ ವಿಜಯವಿಠ್ಠಲ ತಿಮ್ಮರಾಯನ ಕಂಡೆ ॥

॥ ರಕ್ಷಿಯಾದರು ವೀರ ವೈಷ್ಣವರಪಾದಕಾಹೆ ।
ಮೋಕ್ಷಾದ್ರಿ ವೆಂಕಟ ವಿಜಯವಿಠ್ಠಲರೇಯ॥

॥ ಗಿರಿರಾಯ ಸುರರಾಯ ಸುಖಪೂರ್ಣಮಹರಾಯಾ ।
ಉರಗಾದ್ರಿ ವೆಂಕಟವಿಜಯವಿಠ್ಠಲ ಒಲಿದ ॥

॥ ಆನಂದ ಮಯಸಕಲಾಮಾನಂದ ಮಹಿಮಾನೆ ।
ಆನಂದಗಿರಿ ವಿಜಯವಿಠ್ಠಲ ತಿಮ್ಮನ ಕಂಡೆ ॥

॥ ಇಂದು ಸುಳಿದಂತೆ ಅನುಗಾಲ ಎನ್ನೊಳಗೆ ।
ಬಂದು ಉದ್ಧರಿಸೋದು ವಿಜಯವಿಠ್ಠಲರೇಯಾ ॥

॥ ದುರುಳನೆನದೆ ದುರ್ಜನರಿಗೆ ಒಪ್ಪಿಸದೆ ।
ಪರಿಪಾಲಿಸಿ ಸಾಕು ವಿಜಯವಿಠ್ಠಲರೇಯಾ ॥

|| ಕಾರುಣ್ಯನಿಧಿ ನಿನಗೆ ಕಡೆ ಹುಟ್ಟ ಮಗನಾನು ।
ಬೇರೆನೋಡದೆ ಕಾಯೋ ವಿಜಯವಿಠ್ಠಲತಿಮ್ಮ ||

|| ವೆಂಕಟಗಿರಿ ಸ್ವಾಮಿ ಪುಷ್ಕರಣಿವಾಸ ।
ಪಂಕಜಾಪತಿ ವಿಜಯವಿಠಲನ್ನ ಕೊಂಡಾಡು||

|| ತಿರ್ಮಲೇಶನಪಾದ ಶ್ರೀಮತೇಯನಪಾದ ।
ಕರ್ಮನಾಶನ ಮಾಡುವ ವಿಜಯ ವಿಠಲನ ಪಾದ ||

|| ಗರುಡನ ಶ್ರಿಂಗಾರ ಕರದಿ ಒಪ್ಪುವ ಚರಣ ।
ಗಿರಿಯ ತಿಮ್ಮ ವಿಜಯವಿಠಲರೇಯನ ಚರಣ ||

|| ತೀರ್ಥಾದಿಗಳು ನಿನ್ನ ಪಾದದಲ್ಲಿ ಉಂಟಯ್ಯ ।
ಅರ್ಥಾವಿಜಯ ವಿಠಲ ನಿನ್ನ ಚರಣ ಬಿಡೆನಯ್ಯಾ ||

|| ಪಾಂಡ್ಯರಾಯಗೆ ಒಲಿದ ಪರಮಪಾವನ ಚರಣ ।
ಚಂಡ ಕೋಟಿತೇಜ ವಿಜಯವಿಠ್ಠಲನಚರಣ ||

|| ಅರ್ಚಿಪರ ಹೃದಯದೊಳಗೆ ಮಿನುಗುವನಖ ।
ಅರ್ಚಿತ-ವಿಜಯ ವಿಠ್ಠಲನ ನಖ ||

|| ದುಷ್ಟಮರ್ದನಹಸ್ತ ಶಿಷ್ಟ ಪಾಲಕಹಸ್ತ ।
ಶ್ರಿಷ್ಟೇಶ ವಿಜಯವಿಠ್ಠಲ ತಿಮ್ಮನ ಹಸ್ತ ||

||ಅನಂತ ಜಾಂಡದೊಳಗೆ ಬದಕುಮಾಡುವ ಉದರ ।
ಅನಂತವಿಜಯವಿಠ್ಠಲರೇಯನಉದರ ||

|| ವಿಶ್ವತೋವದನ ವಂದಾನಂತ ವದನ ।
ವಿಶ್ವಬಾಹು ವಿಜಯವಿಠ್ಠಲರೇಯನ ವದನ||

|| ದುರ್ಜನರಿಗೆ ನಿತ್ಯ ನರಕ ಕೊಡುವ ಕರ್ನ ।
ಊರ್ಜಿತ ವಿಜಯವಿಠ್ಠಲನ ಸುಂದರ ಕರ್ನ ||

|| ಗುರು ತನುಜನಾನಡುಗಿಸಿ ಕೊಂಡಲೋಚನ ।
ಸಿರಿರಂಗ ಪ್ರಭುರಂಗ ವಿಜಯವಿಠ್ಠಲನಲೋಚನ ||

॥ ಪರಮಾಯುಸಿದ್ಧಿ ಪುದುಮಾರ್ಕಾಂಡ್ಯ ಕ್ಷೇತ್ರ ।
ನರಸಿಂಹಾನಂತಾ ವಿಜಯವಿಠ್ಠಲವಾಸಾ॥

॥ ಎಂದಿಗಾದರೂ ಒಮ್ಮೆ ಜ್ಞಾನದಿಂದಲಿ ನೋಡೆ ।
ಬಂದು ಮಹವೀರ್ಯಾ ವಿಜಯವಿಠ್ಠಲನೊಲಿವ ॥

॥ ಧೇನುಗರೆದುದೆ ಸಾಕ್ಷಿ ಈ ಕಥೆಯನು ತಿಳಿದು ।
ಈ ನಿಧಿಯಲಿ ವಿಜಯವಿಠ್ಠಲನ್ನ ಕೊಂಡಾಡಿ ॥

॥ ಜಯಂತಿ ನದಿ ಸ್ನಾನ ಕನಕ ನರಸಿಂಹನ ।
ಪ್ರೀಯರಾಗಿ ನೋಡುವದು ವಿಜಯವಿಠ್ಠಲ ಒಲಿವಾ ॥

॥ ಜನುಮದೊಳಗೆ ಒಮ್ಮೆ ಪಂಪಾ ಕ್ಷೇತ್ರದ ಯಾತ್ರಿ ।
ಮನಮೆಚ್ಚಿ ಚರಿಸಲು ವಿಜಯವಿಠ್ಠಲ ಒಲಿವಾ ॥

॥ ವ್ಯಾಸಮುನಿಪೂಜಿಪಯಂತ್ರೋದ್ಧಾರಕಹನುಮಾ ।
ಈಶಾನಾ ವಿಜಯವಿಠ್ಠಲನ ದಾಸರ ಪ್ರೇಮಾ ॥

॥ ಸಪ್ತಗಂಗಿಯ ಸ್ನಾನ ಗೈಯೆ ಕ್ಲಿಪ್ತಾವರಿತು ಸಿರಿ ।
ಆಪ್ತನಾಗುವಸಪ್ತಜಿಂಹಾ ವಿಜಯ ವಿಠ್ಠಲ ॥

॥ ವೇಗಾವತಿಯ ತೀರದೊಡೆಯನೆ ವೈಕುಂಠ ।
ದಾಗಾರಾ ವಿಜಯವಿಠ್ಠಲಕಾಂಚಿ ವರದಯ್ಯಾ॥

॥ಕಂಚಿಯ ನಿಲಯಾ ನೀಲವರ್ಣ ಶ್ರೀವತ್ಸ ।
ಲಾಂಛನವರದಾ ಶ್ರೀವಿಜಯವಿಠ್ಠಲಮೆರದಾ॥

॥ ನಿತ್ಯ ಪುಷ್ಕರಣಿ ವಾಸಾ ಶ್ರೀನಿವಾಸಾ ।
ಭೃತ್ಯವರ್ಗವಪಾಲಾ ವರಹಾ ವಿಜಯ ವಿಠ್ಠಲ ॥

॥ ಗಂಗಾಜನಕ ಶಾರಂಗಸಾಯಕ ಹಸ್ತ ।
ರಂಗ ವಿಜಯ ವಿಠ್ಠಲಾ ವಿಕಸಿತಾಂಬುಜ ಚರಣ ॥

॥ ಅರುಣಾಚಲದ ಯಾತ್ರೆ ಮಾಡಿದನರರಿಗೆ ।
ಅರುಣಾ ಚಲವಾಸ ವಿಜಯವಿಠ್ಠಲವೊಲಿವಾ ॥

॥ ಮಧ್ಯಾರ್ಜುನದಯಾತ್ರಿ ಮಾಡಾಲು ಮನವರಿತು ।
ಬಿದ್ದು ಹೋಹದು ಫಲಾನೀವವಿಜಯವಿಠ್ಠಲ ॥

॥ ಉಭಯ ಕಾವೇರಿಯಾವಾಸಾ ಅನಿಮಿಷಾಧೀಶಾ।
ವಿಭುವೆರಂಗರಾಮಾ ವಿಜಯವಿಠ್ಠಲರೇಯಾ ॥

॥ ವಿಧು ಪುಷ್ಕರಣಿಯಾನಿವಾಸ ಶೇಷಶಾಯಿ ।
ಮಧುವೈರಿ ವಿಜಯ ವಿಠ್ಠಲರಂಗಧಾಮಾ॥

॥ ಮೂರು ಯೋಜನ ಕ್ಷೇತ್ರಯಾತ್ರಿಮುದದಿಂದ ಮಾಡುವದು।
ಚೋರಾರಗುರು ವಿಜಯವಿಠ್ಠಲ ತಿರ್ಮಲವೊಲಿವಾ ॥

॥ಋಷಿಮಂಡೂಕವರದವಿಜಯವಿಠ್ಠಲ ತಿಮ್ಮಾ ।
ವೃಷಭಾದ್ರಿನಿಲಯ ಅಳಗಿರಿರಾಯನಕಂಡೆ ॥

॥ರಂಗರಾಜನೆ ಸಂಗೀತರ ಲೋಲಾಕು ।
ರಂಗಕ್ಷೇತ್ರ ಪಂಚನಂಬಿ ವಿಜಯವಿಠ್ಠಲ ॥

॥ ಪಂಚ ತಿರುಪತಿ ಯಾತ್ರೆ ಯಥಾರ್ಥದಲಿ ಮಾಡಿ ।
ಪಾಂಚಜನ್ಯ ಪಾಣಿ ವಿಜಯವಿಠ್ಠಲ ಪೊರೆವಾ ॥

॥ ಫಲ್ಗಾ ಮುನಿಗೆ ವೊಲಿದಾ ಬಲ್ಲಿದಾ ಜಗನ್ನಾಥ ।
ಹುಲ್ಲುಹಾಸಿಕೆಯಲ್ಲಿಪ್ಪ ವಿಜಯವಿಠ್ಠಲ್ಲಾ ॥

॥ಏನು ಸೋಜಿಗವೊಸೇತು ಮಾಹಾತ್ಮೆಯನ್ನು ।
ದ್ಯುನಾಥ ಎಣಿಸುವ ವಿಜಯ ವಿಠ್ಠಲನಿಂದ॥

॥ ಕಂಡಮಾತುರದಲ್ಲಿ ಭವದಶೃಂಖಳವನ್ನು ।
ಖಂಡ್ರಿಸುವ (ಸೇತು) ಶ್ವೇತು ವಿಜಯವಿಠ್ಠಲಮಾಧವ ॥

॥ ಮೊದಲ ನರರು ಮಧ್ಯಾ ದೇವಾಂತ್ಯದನುಜರುತ್ರಿ ।
ವಿಧಮಾಡಿದರಾಮವಿಜಯ ವಿಠ್ಠಲನೊಲಿದು ॥

॥ತಾಮ್ರ ಪರ್ಣಿಯ ಸ್ನಾನನವ ತಿರುಪತಿ ಯಾತ್ರಿ ।
ಸಂಭ್ರಮದಲಿ ಮಾಡೆ ವಿಜಯ ವಿಠ್ಠಲವೊಲಿವಾ ॥

॥ ವೈಕುಂಠಾದಿಧ್ಯಾನಾತಾಮ್ರಪರ್ಣಿಯ ಸ್ನಾನ ಏಕಚಿತ್ತದಲಿ
ಮಾಡಲು ವೊಲಿವ ವಿಜಯವಿಠ್ಠಲ ॥

॥ ಶ್ರದ್ಧೆಯಿಂದಲಿ ಯಾತ್ರೆ ತಿಳಿದು ಪುಣ್ಯರಾಗಿ ।
ಅದ್ವೈತಾ ಬಿಡಿ ನಮ್ಮ ವಿಜಯ ವಿಠ್ಠಲ ಸುಳಿವ ॥

॥ ದಕ್ಷಿಣ ಸಾಲಗ್ರಾಮ ಕ್ಷೇತ್ರ ಸುಧೇಂದ್ರಾ ।
ಅಕ್ಷಯಾಬ್ಧಿವಾಸ ವಿಜಯವಿಠ್ಠಲಧೀಶ ॥

॥ ನಮೊ ನಮೊ ಅನಂತಾ ಆದಿ ಅನಂತಾ ನಿ ।
ಗಮಪಾಲ ವಿಜಯವಿಠ್ಠಲನಂತಾ ॥

॥ಆದಿಕೇಶವ ಕ್ಷೇತ್ರದಲ್ಲಿ ಒಂದು ರಾತ್ರಿ ।
ಸಾಧು ಇರಲು ವಿಜಯವಿಠ್ಠಲನಂತಾ ॥

॥ ಪದುಮನಾಭಾನಂತಾ ನರಸಿಂಹ ವೈಕುಂಠ-।
ಸದ್ಮನೆ ವಿಜಯವಿಠ್ಠಲ ದಾಸರ ಪ್ರೇಮಾ॥

॥ ಪೊಕ್ಕಳಿಂದಲಿಮಗನ ಪೆತ್ತಾ ಪದುಮನಾಭಾ ।
ರಕ್ಕಸರಿಪುವಿಜಯ ವಿಠ್ಠಲ್ಲಾ ಭೋಗಾನಂತಾ ॥

॥ ಯಮಸುತನು ನೋತು ಬಲುಶ್ರಮದಿಂದ ದೂರಾದ ।
ತಮರಿಗೆ ಸಲ್ಲಾದಿದು ವಿಜಯವಿಠ್ಠಲ ಬಲ್ಲಾ ॥

॥ ಭೂಮಿಯೊಳಾವಾವನಾದರು ಮನ್ನಿಸೆ ।
ಸ್ವಾಮಿತೋತಾದ್ರೀಶಾ ವಿಜಯವಿಠ್ಠಲ ಕಾಯ್ವಾ ॥

॥ ಪರಮೇಷ್ಠಿಯಿಂದರ್ಚನೆಗೊಂಡ ತೋತ್ರಾದಿ ।
ವರಮಂದಿರವಾಸ ವಿಜಯವಿಠ್ಠಲ ಧೀಶಾ ॥

॥ ಕರ ಚತುಷ್ಟಯಲಿಂದ ಮೆರೆವಹನುಮಾಘುಟಿಕಾ ।
ಗಿರಿವಾಸ ವಿಜಯವಿಠ್ಠಲ ಪರಮದಾಸ ॥

॥ ಮಾವಾರಿ ಮನ್ನಾರಿ ನಿಲಯಾ ರಾಜಗೋಪಾಲ ।
ಗೋವ ಋಷಿಗೆ ಒಲಿದ ವಿಜಯವಿಠ್ಠಲರೇಯಾ ॥

॥ ಖಾದ್ರಿಪುರಿ ನಿಲಯಾ ನರಸಿಂಗಾ ಭವಭಂಗ ।
ಭದ್ರಾಮೂರುತಿ ಜನಾರ್ದನ ವಿಜಯವಿಠ್ಠಲಾ ॥

॥ ವಲ್ಕಲಾ ಕ್ಷೇತ್ರದ ವಾಸಾ ಜನಾರ್ದನಾ ।
ಬಲವಂತ ವಿಜಯವಿಠ್ಠಲ ಪಾವಕಪಾಲಾ॥

॥ ಭಾರ್ಗವ ಕ್ಷೇತ್ರದೊಳಿದೆ ಕೇವಲಧಿಕ ।
ದುರ್ಗರಮಣ ವಿಜಯವಿಠ್ಠಲ ನಮ್ಮನ್ನು ಪೊರೆವ ॥

॥ ಮಧ್ವರಾಯರ ಕರುಣ ಪಡೆದು ಪಾವನರಾಗಿ ।
ಸಿದ್ಧ ನಾಗುವದು ವಿಜಯ ವಿಠ್ಠಲನ ಪೊಂದಿ ॥

॥ ಬೀಜಯಾತ್ರೆ ಇದು ಕರ್ಮದ ಘಸಣಕ್ಕೆ ।
ತೇಜೋ ಮಯಕೃಷ್ಣ ವಿಜಯವಿಠ್ಠಲ ಮನವೆ ॥

॥ ಶ್ರೀ ಮದಾಚಾರ್ಯರಿಗೆ ಒಲಿದಾ ಉಡುಪಿನ ಕೃಷ್ಣ ।
ಶ್ರೀಮನೋಹರ ನಮ್ಮ ವಿಜಯ ವಿಠ್ಠಲ ಕೃಷ್ಣ ॥

॥ ಮಧ್ವ ಸರೋವರ ಸ್ನಾನ ಮುದ್ದುಕೃಷ್ಣನ ಧ್ಯಾನ ।
ಶುದ್ಧನಾಗಿ ಮಾಡೆ ವಿಜಯವಿಠ್ಠಲ ಕಾವಾ ॥

॥ ಅಡಿ ತೊಲಗದಲಿರು ಹೃದಯ ಸದನ ಮಧ್ಯ ।
ಕಡಗೋಲು ಪಿಡಿದ ವಿಜಯ ವಿಠ್ಠಲ ಕೃಷ್ಣ ॥

॥ ಆವದಾದರು ನಿನಗೆ ವಿಹಿತವೆ ಸರಿ ಸರ್ವ ।
ದೇವೇಶ ವಿಜಯ ವಿಠ್ಠಲ ಉಡುಪಿನ ಕೃಷ್ಣ ॥

॥ ಸುಬ್ರಹ್ಮಣ್ಯದ ಯಾತ್ರೆ ಎಂಥಾತೊ ತಿಳಿಯಾದು ।
ಶುಭ್ರವರ್ಣಾವಿಜಯ ವಿಠ್ಠಲ ನರಹರಿ ಬಲ್ಲಾ ॥

॥ ಧ್ವಜ ಪುರಿ ನಿಲಯಾ ಪಾರ್ವತಿ ಪತಿ ಪುರವೈರಿ ।
ವಿಜಯ ವಿಠ್ಠಲ ನ ಪ್ರಿಯ ಪಾವನಕಾಯಾ ॥

॥ಎಂತು ಗ್ರಹಿಸಲಾರದಂತೆ ತೋರುವಹರಿ ।
ದಂತಿ ಚರ್ಮಾಂಬರ ವಿಜಯವಿಠ್ಠಲ ರೇಯಾ ॥

॥ತುಂಗ ಮಹಿಮೆ ದೇವೋತ್ತುಂಗಾ ತುಂಗಾವಾಸಾ ।
ರಂಗವಿಜಯವಿಠ್ಠಲ ಹರಿಹರ ಮೂರುತಿ ॥

॥ ಛಾಯಾವಗಿಪ್ಪ ಛಾಯಾ ಕ್ಷೇತ್ರ ನಿತ್ಯ ।
ತಾಯಿ ನಮಗೆ ಎನ್ನಿ ವಿಜಯವಿಠ್ಠಲ ಒಲಿವಾ ॥

॥ ಕೃಷ್ಣಾಚೋತ್ತರ ವಾಹಿನಿ ಶ್ವೇತಾದ್ರಿಯಾತ್ರೆಯ ।
ಶಿಷ್ಟನಾಗಿ ಮಾಡೆ ವಿಜಯವಿಠ್ಠಲ ಒಲಿವಾ ॥

॥ ಮನೋರಥ ಸಿದ್ಧ ಮಾಡಯ್ಯ ಮನ್ಮಥನಯ್ಯಾ ।
ಅನುಭವದಿಂದಲಿ ವಿಜಯವಿಠ್ಠಲ ಪಂಢರಿ ॥

॥ ಶರಣು ಶರಣು ನಿನ್ನ ಚರಣಾಬ್ಜ ಯುಗಳಕ್ಕೆ ।
ಕರುಣೆ ಪಂಢರಿಪುರಿ ವಿಜಯವಿಠ್ಠಲರೇಯಾ॥

॥ ಸಂತಾಪ ಕಳೆವಲ್ಲಿ ನೀನಲ್ಲ ದಿನ್ನಿಲ್ಲ ।
ಶಾಂತಮೂರುತಿ ನಮ್ಮ ವಿಜಯವಿಠ್ಠಲ ಕೃಷ್ಣ ॥

॥ ಬೇಡಿದಿಷ್ಟಾರ್ಥ ಬೇಗ ಕೊಡುವ ಚರಣ ।
ಗೂಢ ಮಹಿಮ ವಿಜಯವಿಠ್ಠಲ ರಂಗನ ಚರಣ ॥

॥ಪಂಚ ಗಂಗೆಯ ಯಾತ್ರೆ ಮಾಡಿ ಭಕುತಿಯಿಂದ ।
ಪಂಚರೂಪಾತ್ಮಕಾ ವಿಜಯವಿಠ್ಠಲವಲಿವಾ ॥

॥ ಅಗ್ನಿ ಬಿಂದುವರದಾ ಅನಾದಿ ಮೂರುತಿ ।
ಅಜ್ಞಾನ ಪರಿಹಾರಾ ವಿಜಯವಿಠ್ಠಲ ಕಾಶಿ॥

॥ ಕಾಶಿಯೊಳೊಂದಡಿ ಇಟ್ಟು ಪೋದಡೆವೇದ ।
ವ್ಯಾಸರೂಪಾತ್ಮಕಾ ವಿಜಯವಿಠ್ಠಲ ಬರುವ ॥

॥ ಪಿತ್ರಾದಿ ಕುಲ ಇಲ್ಲಿ ಉದ್ಧಾರವಾಗುವದು ।
ಗೋತ್ರ (ಗಾತ್ರ) ದೊಳಗೆ ಇಪ್ಪಾವಿಜಯವಿಠ್ಠಲ ಬಂಧೂ ॥

॥ ಫಲ್ಗುಣೀ ತೀರದಲಿ ಮೆರೆವ ಮಹತ್ತು ಪಾದ ।
ಫಲ್ಗುಣ ಸಾರಥಿ ವಿಜಯ ವಿಠ್ಠಲನ ಪಾದ ॥

॥ ಎಲ್ಲೆಲ್ಲಿ ಎನ್ನ ಬೆಂಬಲವಾಗಿ ಇದ್ದು ಭೂ ।
ವಲ್ಲಭ ವಿಜಯವಿಠ್ಠಲನ್ನ ತೋರಿಸುವದು ॥



## || ಕಕ್ಷ್ಯಾತಾರತಮ್ಯ ಸುಳಾದಿಗಳ - ಜತೆಗಳು ||

|| ಈ ಪರಿ ತಾರತಮ್ಯವೆ ತಿಳಿದರೆ ಗತಿಗೆ ।
ಸೋಪಾನ ಸಿದ್ಧವೋ ವಿಜಯವಿಠ್ಠಲ ಪೊಳೆವಾ ||

|| ತಾರತಮ್ಯವೆ ತಿಳಿದು ನಡೆದಾ ವಿಶಿಷ್ಟರಿಗೆ ।
ಪಾರು ಮಾಡುವ ವತ್ಸಾ ವಿಜಯ ವಿಠ್ಠಲ ರೇಯಾ ||

||ಗುಣತಾರತಮ್ಯವೆ ತಿಳಿವದು ಚೆನ್ನಾಗಿ ।
ಗುಣವಂತ ವಿಜಯ ವಿಠ್ಠಲ ವ್ಯಕ್ತನಾಗುವಾ||

|| ತೃಣಾಂತ ವಿಡಿದು ಬೊಮ್ಮಾದಿ ಪರಿಯಂತ ನೆನೆದು ।
ಧನ್ಯನಾಗೊ ವಿಜಯವಿಠ್ಠಲನಿಂದ||

|| ಬ್ರಹ್ಮ ಸ್ತಂಭ ಪರಿಯಂತ ಕೊಂಡಾಡಿ ಮರಿಯದೆ ।
ಬ್ರಹ್ಮವಂದಿತ ವಿಜಯವಿಠ್ಠಲ ಮುಂದಾಡುವ ||

|| ಬೊಮ್ಮ ಜನಕ ನಮ್ಮ ವಿಜಯವಿಠ್ಠಲ ಸರ್ವೋ ।
ತ್ತುಮನ ಹೃದಯದಲ್ಲಿ ನಿಲಿಸಿ ಧ್ಯಾನವಮಾಡೊ ।

|| ದತ್ತ ಸ್ವಾತಂತ್ರ ವೆಂಬೋದಿದೆ ಜೀವರಿಗೆ ।
ಸತ್ಯ ಸಂಕಲ್ಪ ವಿಜಯವಿಠ್ಠಲನಿಂದ ||

|| ಪರಮಾಣು ಪ್ರದೇಶದಲ್ಲಿ ಮನಸು ನಿಲ್ಲಿಸಿ ।
ಗುರು ಕೃಪೆಯಲಿ ವಿಜಯವಿಠ್ಠಲನ್ನ ಧ್ಯಾನಿಸು ||

|| ಖಂಡಾ ಖಂಡಧ್ಯಾನ ಸ್ಮರಣೆ ಸಮಾಧಿಯಿಂದ ।
ಖಂಡೇಕರಸವಿಜಯ ವಿಠ್ಠಲನ ನೋಳ್ಪದು ||

|| ಜ್ಞಾನಪೂರ್ವೋತ್ತರದಿಂದ ಪ್ರಾಜ್ಞನ ಕಂಡು ।
ಪ್ರಾಣೇಶ ವಿಜಯವಿಠ್ಠಲನ್ನ ಚಿನ್ಮಿತ್ರನ ಕಾಣೊ ||

|| ಅವರವರಯೋಗ್ಯತೆದಂತೆ ನಡೆಸುವನು ನಮ್ಮಾ ।
ಪವಮಾನಂತರ್ಯಾಮಿ ಶ್ರೀವಿಜಯವಿಠ್ಠಲಸ್ವಾಮಿ ||

||ನಿರ್ದುಃಖದಲಿ ಸಮರು ಸರ್ವಜೀವಿಗಳೆನ್ನು ।
ದುರ್ಧರುಷ ವಿಜಯವಿಠ್ಠಲಗತಿಪ್ರದಾತ||

|| ಅಂಧನ್ನ ತಮಸಿಗೆ ಸಾಧನ ಸರ್ವದಲಿ ।
ಕುಂದದೆ ಮಾಳ್ಪರು ವಿಜಯವಿಠ್ಠಲ ಬಲ್ಲ||

||ನೀಚೋಚ್ಚವನೆ ತಿಳಿದು ಜಲದಲ್ಲಿ ಪ್ರವರ್ತಿಸು ।
ಗೋಚರಿಸುವ ನಮ್ಮ ವಿಜಯವಿಠ್ಠಲಸ್ವಾಮಿ ||

## ಸೃಷ್ಟಿಪ್ರಕರಣ

॥ಜಗತ್ಸತ್ಯಾ ಅನಿತ್ಯಾ ಎನಿಸುವದು ಕಡೆಗೆ ।
ಜಗದೈವ ವಿಜಯವಿಠ್ಠಲನೆ ಎಂದಿಗೆ ಸತ್ಯಾ॥

॥ ತಾರವಿಚಾರ ವಿಚಾರತನದಲಿ ಗ್ರಹಿಸು ।
ಧಾರಕ ಶಕುತಿಯಿಂದ ವಿಜಯವಿಠ್ಠಲಬಲ್ಲ॥

॥ ಅಂತರ ಬಹಿರದೊಳು ವ್ಯಾಪಿಸಿವ್ಯಕ್ತದಲ್ಲಿ ।
ತಂತು ವರ್ಧನಾ ವಿಜಯವಿಠ್ಠಲ ನೀನದ್ಭುತ ॥

॥ಅಕ್ಷರಾಕ್ಷರದಿಂದ ಭಗವನ್ನಾಮವೆ ಚಿಂತಿಸು ।
ಅಕ್ಷರಕ್ಷರಪುರುಷ ವಿಜಯವಿಠ್ಠಲ ಸುಳಿವ॥

॥ ಕಾಲವಿವರತಿಳಿದು ವಿಜಯವಿಠ್ಠಲರೇಯನ ।
ಕಾಲಿಗೆರಗಿ ಬದುಕು ಜ್ಞಾನ ಭಕುತಿಯಿಂದ॥

॥ ಸಂಧಿಕಾಲವೆ ತಿಳಿದು ಸತತಸಾಧನಮಾಡು ।
ಮಂದರಾದ್ರಿಧರವಿಜಯವಿಠ್ಠಲ ಒಲಿವ॥

॥ ಕಾಲಾಧಿಷ್ಟಾನದಲ್ಲಿ ಕಾಲನಾಮಕನಾದ ।
ಶ್ರೀಲೋಲ ವಿಜಯವಿಠ್ಠಲನ ಧ್ಯಾನವ ಮಾಡು ॥

॥ ಮುಕ್ತಿಯಲಿ ಈ ಪರಿ ಕ್ರೀಡಿಯಾಡುವ ಸರ್ವ ।
ಶಕ್ತ ಗುಣಪೂರ್ಣವಿಜಯವಿಠ್ಠಲ ವೊಲಿವ ॥

॥ಯಿರಳು ಹಗಲು ಇದನೆ ಯೋಚಿಸು ಮನದಲ್ಲಿ ।
ಕರುಣಾಕರಮೂರ್ತಿ ವಿಜಯವಿಠ್ಠಲ ಕಾಣೋ ॥

॥ ಚತುರ್ಮುಖಧರಿಸಿದ ಶರೀರ ಇನಿತಯ್ಯಾ ।
ಚತುರಮೂರುತಿ ತುರ್ಯವಿಜಯವಿಠ್ಠಲನಿಂದ ॥

॥ ಎಲ್ಲಿಂದುದ್ಭವರೆಲ್ಲಾ ಅಲ್ಲಿಗಭಿಮಾನಿಗಳು ।
ಬಲ್ಲಿದ ವಿಜಯ ವಿಠ್ಠಲನು ಬಲ್ಲನು ಕಾಣೊ ॥

॥ ಸೂಕ್ಷ್ಮಾ ಸೃಷ್ಟಿಯೆನ್ನಿ ಅಜಗೆಹತ್ತನೆ ವರುಷ ।
ಈಕ್ಷ್ಮಾಧರ ದೇವಾ ವಿಜಯವಿಠ್ಠಲರೇಯಾ॥

॥ ದ್ವಿವಿಧಸರ್ವಗವ ತಿಳಿದು ಯೋಚಿಸು ನಿನ್ನೊಳಗೆ ।
ಭವದೂರ ವಿಜಯವಿಠ್ಠಲರೇಯನೆ ಬರುವ ॥

॥ ಸಕಲಕ್ಕೂ ಕಾರಣ ಕಾರ್ಯರೂಪನು ನೀನೆ ।
ಲಕುಮಿ ವಲ್ಲಭ ನಮ್ಮ ವಿಜಯವಿಠ್ಠಲರೇಯ ॥

॥ ಬ್ರಾಹ್ಮಾಂಡ ಸರ್ಗ ಸೂಕ್ಷ್ಮ ಸ್ಥೂಲವೆ ತಿಳಿದು ।
ದೇಹದೊಳಗಿದ್ದ ವಿಜಯವಿಠ್ಠಲನ ನೋಡು ॥

॥ ಎಲ್ಲ ಭೂತಗಳೊಡೆಯ ವಿಜಯವಿಠ್ಠಲ ನೊಬ್ಬ।
ಬಲ್ಲಿದ ಒಲಿದರೆ ಅನ್ಯಭೂತಗಳಿಲ್ಲ ॥

॥ ಕುಕ್ಷಿಯೊಳು ಸ್ಥಾಪಿಸಿ ಈ ಕ್ಷಿತಿಯೊಳು ಬೀರಿ ।
ಅಕ್ಷಯಾ ವಿಜಯವಿಠ್ಠಲಗೆ ಬಡ್ಡಿಗೆ ಈವ ॥

॥ ಭುತ ಭೂತಾಭಿಮಾನಿಗಳ ನೆನೆದು ಪರಂ ।
ಜ್ಯೋತಿ ವಿಜಯ ವಿಠ್ಠಲ ಸರ್ವಕರ್ತನೆನ್ನು ॥

॥ ಪಂಚ ಕೋಶಗಳಲ್ಲಿ ಇಂಥಾ ಮಹಿಮೆ ಉಂಟು ವಿ-।
ರಂಚಿಜನಕ ವಿಜಯವಿಠ್ಠಲನೆ ನಿಯಾಮಕ ॥

॥ ಅತೀಂದ್ರತಿ ಜ್ಞಾನದಲಿ ದೇಹದೊಳಗೆ ಇದ್ದ-।
ಚತುರಮೂರುತಿ ಪ್ರಾಜ್ಞವಿಜಯವಿಠ್ಠಲನ ನೋಡು ॥

॥ ಧ್ಯಾನವನ್ನೆ ಮಾಡು ದಾಸ ಭಾವವೆ ವಹಿಸಿ ।
ಜ್ಞಾನದಾಯಕ ವಿಜಯವಿಠ್ಠಲನ್ನ ಪೂಜಿಸು ॥

॥ ಜೀವಕೆ ಪ್ರತಿಬಂಧವಾಗಿದ್ದ ಜನರಿವರು ।
ದೇವೇಶ ವಿಜಯವಿಠ್ಠಲನಿಂದ ತೊಲಗುವರು॥

॥ ಇಲ್ಲಿಗೆ ಬ್ರಾಹ್ಮಾಂಡ ಸಿದ್ಧವಾಯಿತು ಸಿರಿ ।
ವಲ್ಲಭವಿಜಯ ವಿಠ್ಠಲನಿಂದ ಕ್ರಮದಿಂದ॥

॥ ಪದ್ಮಕಲ್ಪದ ಕಥೆ ಕೇಳಿದ ಮನುಜಂಗೆ ।
ಪದ್ಮಿವಲ್ಲಭ ನಮ್ಮ ವಿಜಯ ವಿಠ್ಠಲ ಕಾವ ॥

॥ ಪ್ರತಿ ಪ್ರತಿ ಪ್ರತೀಕಾದಲ್ಲಿ ಅಪ್ರತಿಹತನಾದ ।
ಪತಿ ವಿಜಯ ವಿಠ್ಠಲ ವಿರಾಟಮೂರ್ತಿಯಧ್ಯಾನಿಸು ॥

॥ ಸಪ್ತದ್ವೀಪದ ಸತ್ಕಥೆ ಶ್ರವಣ ಮಾಡಿದ ಜ್ಞಾನಿಗೆ ।
ಆಪ್ತನಾಗಿಪ್ಪನು ವಿಜಯವಿಠ್ಠಲವೊಲಿದು॥

॥ ಜಂಭಾರಿ, ಶಂಭು ಸ್ವಾಯಂಭುನಿರ್ಜರ ಹೃದಯ ।
ಅಂಬುಜವಾಸಲಕ್ಷೀಶ ವಿಜಯವಿಠ್ಠಲ॥

॥ ಸೃಷ್ಟಿಕ್ರಮವು ಕೇಳಿ ತಿಳಿದಷ್ಟು ಪೇಳಿಪ್ಪೆ ।
ಸೃಷ್ಟೇಷ್ಟಾಜನಕ ನಮ್ಮ ವಿಜಯವಿಠ್ಠಲದಯದಿಂದ॥

॥ ಚಿಂತಿಸು ಈ ಪರಿಮನದಲ್ಲಿ ಸೃಷ್ಟಿಯ ।
ಸಂತತವಿಜಯವಿಠ್ಠಲ ಮಾಡುವನೆಂದು ॥

॥ ತಿಳಿದು ಈ ಬಗೆಯಿಂದ ಧ್ಯಾನವ ಮಾಡಿರೊ ।
ಒಲಿವನು ವಿಜಯವಿಠ್ಠಲನಾಡಿಯೊಳು ಪೊಳೆವ ॥

॥ ನಾಡಿಪ್ರಕರಣವನು ತಿಳಿದು ಕೊಂಡಾಡಲು ।
ಗೂಡಿನೊಳಗಿದ್ದಂಥ ವಿಜಯವಿಠ್ಠಲ ಒಲಿವ ॥

॥ ಪುಟ್ಟಿಸುವದು ಬಿಡಿಸೊ ಪೂರ್ಣಕರುಣಾಂಬುಧೆ ।
ವಿಠ್ಠಲ ವಿಜಯವಿಠ್ಠಲ ಮತ್ಪ್ರಿಯಾ॥



## -ಪ್ರಮೇಯಭಾಗ-

॥ ಬೊಮ್ಮಾಂಡದೊಳಗೆಲ್ಲ ಬಿಂಬ ಕ್ರಿಯವ ತಿಳಿಯೆ ।
ರಮ್ಮೆಯರಸಶೌರಿ ವಿಜಯವಿಠ್ಠಲ ಕುಣಿವಾ ॥ 1

॥ ಸ್ವಾಮಿ ಭೃತ್ಯನೆಂದು ಕಾಲಕಾಲಕೆ ನುಡಿದು ।
ಕಾಮಿಸಿ ವಿಜಯವಿಠ್ಠಲರೇಯನ ಪಾದ॥ 2

॥ ಹರಿಯೆ ಜಗಕೆ ಕರ್ತಾ ಹರಿಯೆ ಜಗಕೆ ಭರ್ತಾ ।
ಹರಿಸರ್ವಸಾಹಾ ವಿಜಯವಿಠ್ಠಲನೆ ಶಕ್ತಾನೆನ್ನಿ ॥ 3

॥ ಪೊಸದಾಗಿ ಕರ್ಮಗಳು ಬರಲುಳ್ಳವೆ ಇಲ್ಲಾ ।
ಅಸುರ ನಿರ್ಜರ ಗುರು ವಿಜಯವಿಠ್ಠಲರೇಯಾ ॥ 4

॥ ಉಭಯಚೇತನ ಕರ್ಮ ಅನಾದಿ ಬಂದಿದೆ ।
ಪ್ರಭುವೆ ವಿಜಯವಿಠ್ಠಲಾ ವಿಶ್ವನಾಟಕ ದೈವಾ ॥ 5

॥ ನಂಬಿದ ಭಕ್ತರನಾನಾ ಪರಿಯಲ್ಲಿ ।
ಅಂಬುಜಾಕ್ಷ ವಿಜಯ ವಿಠ್ಠಲ ಕಾವುತಲಿಪ್ಪ ॥ 6

॥ ಎಲ್ಲರಿಗೆ ಉಪ ಜಿವ್ಯಾರಜತಪೀಠಪುರಿ ।
ವಲ್ಲಭವಿಜಯವಿಠ್ಠಲ ಮಧ್ವಮುನಿವರದ॥ 7

॥ ಭಕ್ತರವಶವಾಗಿ ಬಹು ಚೇಷ್ಟೆ ಮಾಡಿಸುವ ।
ಶಕ್ತ ಕ್ರಿಯಾವಿಜಯ ವಿಠ್ಠಲದೀನಉದ್ಧಾರ॥ 8

॥ ಏಕಾನೇಕಹರಿ ಎಲ್ಲ ಕಾಲದ ಲೆಂದು
ಲೋಕಾಭಿನ್ನ ವಿಜಯವಿಠಲನ್ನ ನಂಬಿರೋ॥ 9

॥ ಭಕ್ತಿ ಸುಧೆಯೊಳು ಮುಣಗಿದ ಮನುಜಗೆ ।
ಮುಕ್ತಿ ಗೊಡವೆ ಏನೊ ವಿಜಯ ವಿಠ್ಠಲ ಮೂರ್ತಿ ॥ 10

॥ ಅತಿವಿಚಿತ್ರವೊ ನಿನ್ನ ವ್ಯಾಪಾರ ನೋಡಲು ।
ಪ್ರತಿಯಿಲ್ಲ ಜಗದೊಳು ವಿಜಯವಿಠ್ಠಲಸ್ವಾಮಿ॥ 11

॥ಭಕ್ತ ವತ್ಸಲವನ್ನು ನಡಿಸುತ್ತಾ ಇಪ್ಪನೆ ।
ಶಕ್ತಾ ವಿಜಯ ವಿಠ್ಠಲ ತುತಿಪರಿಗಳುಕಂದಿ ॥

॥ ಒಂದಾವಸ್ಥಾವನೆ ಆವಲ್ಲಿ ಎನಗಿಲ್ಲ ।
ಎಂದಿಗೆ ನಿನ್ನವ ವಿಜಯವಿಠ್ಠಲ ಮೂರ್ತಿ ॥

॥ಆಯೆಂಬುದು ಮೊದಲು ಹರಿ ನುಡಿಸಿದನೆಂದು ।
ಕಾಯದೊಳು ತಿಳಿಯೊ ವಿಜಯವಿಠ್ಠಲ ಸುಳಿವಾ ॥

॥ ನಿನ್ನಾಧೀನವಾಗಿ ಸಕಲವಸ್ತಗಳಿರೆ ।
ಎನ್ನದೆಂಬೋದೇನೊ ವಿಜಯವಿಠ್ಠಲಸ್ವಾಮಿ ॥

॥ ನೀನಿತ್ತ ಸ್ವಾತಂತ್ರ ವಲ್ಲೆ ನೆಂದರೆ ಬಿಡದು ।
ನಾನೇ ನಿನ್ನವನಯ್ಯಾ ವಿಜಯವಿಠ್ಠಲ ಕರುಣಿ ॥

॥ ತಿಳಿದು ನಡದವಗೆ ದೋಷವೆತ್ತಣದೊನಿ-।
ಶ್ಚಲಮೂರ್ತಿ ವಿಜಯಯವಿಠ್ಠಲ ಸರ್ವಸ್ವಾತಂತ್ರ ॥

॥ ಹರಿನುಡಿಸಿದದರಿಂದ ನುಡಿದೆ ಎನ್ನಕೃತ್ಯಾ ।
ಅರಸೆ ವಿಜಯವಿಠ್ಠಲ ವಂದಾದರು ಇಲ್ಲ॥

॥ ಈಶಜೀವ ರೊಳುಲಕುಮಿಗೆ ಭೇದಬಲ್ಲಂಥ ।
ದಾಸರೊಳಿಡುವದು ವಿಜಯವಿಠ್ಠಲ ಬಂಧು ॥

॥ ಭಕ್ತಿಗೆ ಪ್ರಧಾನವಾದ ಚಿಂತನೆಮಾಡು ।
ಮುಕ್ತಿದಾಯಕದೇವ ವಿಜಯವಿಠ್ಠಲವೊಲಿವ॥

॥ ನಿನ್ನಿಂದಾಗುವ ವ್ಯಾಪಾರಕ್ಕೆ ನಾನಾಡ್ಡೇನೊ ।
ಚನ್ನಿಗ ವಿಜಯವಿಠ್ಠಲ ಸರ್ವಾಧಿಷ್ಟನೆ ॥

॥ ಹರಿಯ ಪ್ರಯೋಜನ ಮಾಡಿದ ಮೇಲೆ ತಿಳಿವಂಥ ।
ಪರಿಯುಂಟು ವಿಜಯವಿಠ್ಠಲನ ಕರುಣದಿಂದ ॥

॥ ನಿನ್ನಂಘ್ರೀ ನಂಬೀದ ದಾಸಾನುದಾಸಗೆ ।
ಇನ್ನು ಪಾಪಗಳುಂಟೇನಯ್ಯಾ ವಿಜಯವಿಠ್ಠಲ॥

|| ಜಗತ್ತಿನ ವ್ಯಾಪಾರ ನಿಮ್ಮಿಂದಾಗುವದುಪ- |
ನ್ನಗ ಶಾಯಿ ವಿಜಯವಿಠ್ಠಲನಲ್ಲಿ ಮನವಿರಲಿ|| 24

|| ವಿಷಯಂಗಳಲ್ಲಿ ಚರಿಸಿದರೇನೊ ನಿನ್ನ |
ಪೆಸರುಗೊಂಡರೆ ಪುಣ್ಯ ವಿಜಯವಿಠ್ಠಲರೇಯಾ|| 25

||ಜೀವಮಾಡುವ ಕರ್ಮ ಒಂದಾದರೆ ಇಲ್ಲಾ |
ದೇವ ವಿಜಯವಿಠ್ಠಲ ಸುರರಿಂದಾಗುವದೊ || 26

|| ಕರ್ಮಾಕರ್ಮದಲ್ಲಿ ನಿಷ್ಕಾಮಕನಾಗಿ |
ಕರ್ಮನಾಮಕ ವಿಜಯವಿಠ್ಠಲನ್ನ ಚಿಂತಿಸು|| 27

|| ಮನದಾನಿಗೆ ರುದ್ರಮಾವು ತಂಕುಶ ಜನಾ-|
ರ್ದನನಾಮವೇ ನಿಜ ವಿಜಯವಿಠಲ ಒಲಿವಾ || 28

|| ಇಂದ್ರಯೋನಿಯ ಮಧ್ಯ ಇನಿತು ವ್ಯಾಪಾರಸುಖ |
ಸಾಂದ್ರ ವಿಜಯವಿಠ್ಠಲ ಮಾಡುವ ಬಲುಲೀಲಾ || 29



